8. The user agency shall ensure that there should be no damage to the available wildlife.
9. The user agency shall abide by all the conditions imposed upon by Government and Principal Chief Conservator of Forests.
10. Any other condition imposed by the Government of India/Government of Karnataka will have to be abided by the lessee.

By Order and in the name of the Governor of Karnataka,

**S.R. VATSALA**

PR-594

Under Secretary to Government,
Forest, Ecology and Environment Department.

**Subject:** Diversion of 2.52 ha of forest land in Kemphole and Kagenari RF for Power transmission line of Karnataka Power Transmission Corporation Kadumane Mini Hydel Scheme-I in Hassan forest Division/district.

**Read:** 1. Letter No.A5(3)GFI.CR.6/05-06 dated 7-10-2005 of Principal Chief Conservator of Forests, Bangalore.

2. State Government letter No.FEE 211 FGL 2005, dated :9.12.2005.

3.Letter No. 4-KRB 142/2005-BAN, dated 26-12-2005 of Government of India, Ministry of Environment and Forests, Regional Office, (South Zone), Bangalore .

4. State Government letter No.FEE 211 FGL 2005, dated: 3.2.2006.

5. Letter No. 4-KRB 142/2005-BAN, dated 15-2-2006 of Government of India, Ministry of Environment and Forests, Regional Office, (South Zone), Bangalore .

**Preamble:**

The Principal Chief Conservator of Forests, Bangalore vide his letter dated 7-10-2005 read at (1) above has sent a proposal to obtain the approval of Government of India under the Forest (Conservation) Act 1980, for diversion of 2.52 ha. of forest land in Kemphole and Kagenari Reserve Forest for Power Transmission line of KPTC Kadumane Mini Hydel Sheme-I for improving the power supply in Sy.No.81 of Maragunde Village, Sakaleshpura Taluk, Hassan District.

Accordingly, the proposal was recommended to Government of India, Ministry of Environment and Forests, Regional Office(South Zone), Bangalore for approval vide Government letter dated: 9.12.2005 read at (2) above

The Government of India, Ministry of Environment and Forests, Bangalore vide their letter dated 26-12-2005 read at (3) above has given ;its approval in Principle (Stage-I) subject to fulfillment of certain conditions and ;the same was communicated to the Principal Chief Conservator of Forests, Bangalore for compliance.

The Principal Chief Conservator of Forests, Bangalore vide his letter dated 20.01.2006 furnished the compliance report and the same has been sent to Government of India vide State Government letter dated: 3.2.2006 read at (4) above.

Finally, the Government of India Ministry of Environment and Forests, Regional Office, (South Zone), Bangalore vide in their letter dated: 15-2-2006 read at (5) above has conveyed their approval (Stage-II) for diversion of 2.52 ha. of forest land in Kemphole and Kagenari Reserve Forest for Power Transmission line of KPTC, Kadumane Mini Hydel Scheme-1 in Hassan forest division/district in favour of Executive Engineer(Elect), Major Works Division, KPTCL, Hassan subject to certain conditions.

The proposal has been examined in detail and Hence the following order.

**Government Order No. FEE 211 FGL 2005, Bangalore, Dated: 3rd April, 2006**

In the circumstances explained in the preamble above, Government are pleased to accord approval under section (2) of Forest (Conservation) Act 1980 for diversion of 2.52 ha. of forest land in Kemphole and Kagenari Reserve Forest for power Transmission line of KPTC, Kadumane Mini Hydel Scheme-1 in Hassan forest division/district in favour of Executive Engineer(Elect), Major Works Division, KPTCL, Hassan subject to the following conditions:

1. The legal status of forest land shall remain unchanged.
2. The lease period is for a period 30 years.
3. The land shall be utilized only for the purpose for which it is released.
4. The user agency has to pay the lease rent as fixed by the Government at the time of sanction and any subsequent Orders in this regard.

5. In the case the land is not used for the stipulated purpose or when it is no longer needed for the stipulated purpose the area should automatically revert back to the Forest Department.
6. Karnataka Forest Act 1963 and Rules 1969 will be applicable for any violation.
7. If the land is not utilized for the purpose within 2 years, and also if any violation is found of the stipulated conditions, the forest land shall be forfeited to Department after the approval from Government by the Conservator of Forests under Section 82 (read with section 69 of Karnataka Forest Rules) of Karnataka Forest Act 1963.
8. Only minimum number of trees shall be cut based on actual requirement of the project.
9. The user ageny shall pay the extraction and transportation charges of trees as estimated by the Deputy Conservator of Forests from the proposed land.
10. The user agency shall pay the cost of raising compensatory afforestation over an extent of 2.52 ha. of degraded forest land at the rate prevailing at the time of sanction (at present it is Rs. 54,200/- per ha.).
11. The user agency has to pay the Net Present Value of the forest land as fixed by Government vide Notification No.FEE 247 FGL 2002, dated: 17.1.2004.
12. Any other conditions to be stipulated by the Government of India/State Government /Principal Chief Conservator of Forests,Karnataka in the interest of conservation of forests.

By Order and in the name of the Governor of Karnataka,

**S.R. VATSALA**

Under Secretary to Government,

Forest, Ecology and Environment Department.

PR-595

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಸಣ್ಣ ನೀರಾವರಿ ಇಲಾಖೆ ಅಧೀನದಲ್ಲಿ ಬರುವ ಕ್ಷೇತ್ರ ಕಛೇರಿಗಳಿಗೆ ಗಣಕಯಂತ್ರಗಳು, ಪ್ರಿಂಟರ್‌ಗಳು ಮತ್ತು ಯು.ಪಿ.ಎಸ್.ಗಳನ್ನು ಖರೀದಿಸಲು ಮಂಜೂರಾತಿ ನೀಡುವ ಕುರಿತು.

**ಓದಲಾಗಿದೆ:** (1) ದಿನಾಂಕ: 16.10.2005ರ ಪತ್ರ ವ್ಯವಹಾರದೊಂದಿಗೆ ಅಂತ್ಯಗೊಂಡಿರುವ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಮುಇಂ/ ಸನೀ(ದ)/ ಗಣಕೀಕರಣ/ 05/ 1961.

(2) ದಿನಾಂಕ: 30.01.2006ರ ಪತ್ರ ವ್ಯವಹಾರದೊಂದಿಗೆ ಅಂತ್ಯಗೊಂಡಿರುವ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ:ಮುಇಂ/ ಸನೀ(ಉ)ವ/ ಬಿಜಾ/ ನಿ-1/ 2005-06/ 457.

**ಪ್ರಸ್ತಾವನೆ:**

ಮೇಲೆ (1) ಮತ್ತು (2)ರಲ್ಲಿ ಓದಲಾದ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣವಲಯ, ಬೆಂಗಳೂರು ಮತ್ತು ಉತ್ತರ ವಲಯ, ಬಿಜಾಪುರ ರವರ ಪತ್ರಗಳಲ್ಲಿ ತಮ್ಮ ಅಧೀನದಲ್ಲಿ ಬರುವ ವೃತ್ತ ಕಛೇರಿಗಳು, ವಿಭಾಗ ಕಛೇರಿಗಳು ಮತ್ತು ಉಪವಿಭಾಗ ಕಛೇರಿಗಳ ಉಪಯೋಗಕ್ಕಾಗಿ ಪೂರಕ ಉಪಕರಣಗಳೊಂದಿಗೆ ಗಣಕಯಂತ್ರಗಳನ್ನು ಖರೀದಿಸಲು ಸರ್ಕಾರದ ಅನುಮೋದನೆಯನ್ನು ಕೋರಿರುತ್ತಾರೆ.

ಮುಖ್ಯ ಅಭಿಯಂತರರುಗಳ ಪ್ರಸ್ತಾವನೆಯಲ್ಲಿ ತಿಳಿಸಿರುವಂತೆ ಸಣ್ಣ ನೀರಾವರಿ ಯೋಜನೆಗಳಾದ ಕೆರೆಗಳು, ಪಿಕಪ್‌ಗಳು, ಬಾಂದಾರಗಳು, ಕಿಂಡಿ ಅಣೆಕಟ್ಟುಗಳು, ಬ್ಯಾರೇಜುಗಳು ಮತ್ತು ಏತ ನೀರಾವರಿ ಯೋಜನೆಗಳನ್ನು ಅಧೀನ ಕಛೇರಿಗಳಿಂದ ಹೆಚ್ಚಿನ ಪ್ರಮಾಣದಲ್ಲಿ ನಿರ್ವಹಿಸಲಾಗುತ್ತಿದ್ದು, ಈ ಕಾರ್ಯ ಕೈಗೊಳ್ಳುವಲ್ಲಿ ಕಾಮಗಾರಿಗಳ ಅಂದಾಜು, ವಿನ್ಯಾಸ, ರೇಖಾಚಿತ್ರ ಹಾಗೂ ಕಾಮಗಾರಿಗಳ ಅಭಿವೃದ್ಧಿಗಳ ಬಗ್ಗೆ ಅಂಕಿಅಂಶಗಳನ್ನು ದಾಖಲಿಸಲು ಕಛೇರಿಗಳಿಗೆ ಗಣಕಯಂತ್ರದ ಅಗತ್ಯವಿರುವುದಾಗಿ ಪ್ರಸ್ತುತ ಎಲ್ಲಾ ಕಛೇರಿಗಳಿಗೂ ಗಣಕಯಂತ್ರಗಳನ್ನು ಒದಗಿಸದೇ ಇರುವುದರಿಂದ ಕೆಲಸಕಾರ್ಯಗಳಿಗೆ ಅಡಚಣೆ ಉಂಟಾಗಿದೆ ಎಂದು ತಿಳಿಸಿ ಗಣಕಯಂತ್ರಗಳ ಖರೀದಿಗೆ ಅನುಮೋದನೆಯನ್ನು ಕೋರಿರುತ್ತಾರೆ.

ಸಣ್ಣ ನೀರಾವರಿ ದಕ್ಷಿಣ ವಲಯಕ್ಕೆ ಒಟ್ಟು 31 ಗಣಕಯಂತ್ರಗಳನ್ನು ಖರೀದಿಸಲು ಪ್ರತಿ ಗಣಕಯಂತ್ರವನ್ನು ಅದರ ಪೂರಕ ಉಪಕರಣಗಳೊಂದಿಗೆ ರು.35,480/-ರಂತೆ ಒಟ್ಟು 31 ಗಣಕಯಂತ್ರಗಳಿಗೆ ಒಟ್ಟು ರೂ. 10,99,880/- ವೆಚ್ಚವಾಗಲಿದ್ದು ಇವುಗಳನ್ನು ಖರೀದಿಸಲು ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಅದರಂತೆ, ಸಣ್ಣ ನೀರಾವರಿ ಉತ್ತರ ವಲಯಕ್ಕೆ ಒಟ್ಟು 46 ಗಣಕಯಂತ್ರಗಳನ್ನು ಪ್ರತಿ ಒಂದು ಗಣಕಯಂತ್ರವನ್ನು ಅದರ ಪೂರಕ ಉಪಕರಣಗಳೊಂದಿಗೆ ರೂ.53,000/- ಗಳಂತೆ ಒಟ್ಟು 46ಕ್ಕೆ ರೂ.24,38,000/-ಗಳ ವೆಚ್ಚವಾಗಲಿದ್ದು ಇವುಗಳನ್ನು ಖರೀದಿಸಲು ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಈ ಪ್ರಸ್ತಾವನೆಯನ್ನು ಗಣಕಯಂತ್ರಗಳ ಖರೀದಿ ಬಗ್ಗೆ ರಚಿಸಲಾಗಿರುವ ಇಲಾಖಾ ತಾಂತ್ರಿಕ ಸಲಹಾ ಪ್ಯಾನಲ್ ಸಮಿತಿಯ (T.A.P.)ಯ ದಿನಾಂಕ:21.02.2006ರಂದು ನಡೆದ ಸಭೆಯಲ್ಲಿ ಮಂಡಿಸಿದ್ದು, ಸಮಿತಿಯು ಮುಖ್ಯ ಅಭಿಯಂತರರು ಸಣ್ಣ ನೀರಾವರಿ ದಕ್ಷಿಣ ವಲಯದ 23 ಉಪವಿಭಾಗ ಕಛೇರಿಗಳಿಗೆ ಮತ್ತು ಉತ್ತರ ವಲಯದ 27 ಉಪವಿಭಾಗ ಕಛೇರಿಗಳಿಗೆ ತಲಾ ಒಂದು ಗಣಕಯಂತ್ರ+ ಪ್ರಿಂಟರ್+ಯು.ಪಿ.ಎಸ್.ಗಳನ್ನು ಅನುಬಂದ-1ರಲ್ಲಿ ಸೂಚಿಸಿರುವ ಕಾನ್‌ಫಿಗರೇಷನ್ ಮತ್ತು ಅನುಬಂಧ-2ರಲ್ಲಿ ಸೂಚಿಸಿರುವ ಯು.ಪಿ.ಎಸ್. ಸ್ಪೆಸಿಫಿಕೇಷನ್ ಒಳಗೊಂಡು "ಡಿ.ಜಿ.ಎಸ್. ಮತ್ತು ಡಿ"ನ ದರ ಕರಾರುಗಳ ಪ್ರಕಾರ ಹಣಕಾಸಿನ ಲಭ್ಯತೆಯಾಧಾರದ ಮೇಲೆ 2005-06ನೇ ಸಾಲಿನಲ್ಲಿ ದಕ್ಷಿಣ ವಲಯ ಉಪವಿಭಾಗ ಕಛೇರಿಗಳಿಗೆ ರೂ.10.00 ಲಕ್ಷ ಮತ್ತು ಉತ್ತರವಲಯ ಉಪವಿಭಾಗ ಕಛೇರಿಗಳಿಗೆ ರೂ.10.00 ಲಕ್ಷಗಳಲ್ಲಿ ಖರೀದಿಸಲು ಸಹಮತಿ ನೀಡಿರುತ್ತದೆ. ಆದರೆ, ಇ-ಗವರ್ನೆನ್ಸ್ ಪ್ರತಿನಿಧಿಗಳು ಯಾವುದೇ ಇ-ಗವರ್ನೆನ್ಸ್ ಯೋಜನೆ ಪ್ರಕಾರ ರೂ.10.00 ಲಕ್ಷ ಮೀರಿದಲ್ಲಿ ಅದಕ್ಕೆ ಮುಖ್ಯಕಾರ್ಯದರ್ಶಿಯವರ ಅನುಮೋದನೆ ಬೇಕಾಗಿದೆ ಎಂದು ತಿಳಿಸಿರುತ್ತಾರೆ.

ಸರ್ಕಾರವು ಮೇಲ್ಕಂಡ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 37 ಮಸಾವಿ 2005, ಬೆಂಗಳೂರು, ದಿನಾಂಕ:28ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಣ್ಣ ನೀರಾವರಿ ಇಲಾಖೆಯ ದಕ್ಷಿಣ ವಲಯದ 12 ಉಪವಿಭಾಗ ಕಛೇರಿಗಳಿಗೆ 12 ಗಣಕಯಂತ್ರಗಳು+ಪ್ರಿಂಟರ್+ಯು.ಪಿ.ಎಸ್.ಗಳನ್ನು ಖರೀದಿಸಲು ಹಾಗೂ ಉತ್ತರ ವಲಯದ 13 ಉಪವಿಭಾಗ ಕಛೇರಿಗಳಿಗೆ 13 ಗಣಕಯಂತ್ರಗಳು+ ಪ್ರಿಂಟರ್‌ಗಳು+ಯು.ಪಿ.ಎಸ್.ಗಳನ್ನು ಖರೀದಿಸಲು ಸರ್ಕಾರವು ಅನುಮೋದನೆ ನೀಡಿದೆ.

ಇದಕ್ಕಾಗಿ 2005-06ನೇ ಸಾಲಿನಲ್ಲಿ ಲಭ್ಯವಿರುವ ಅನುದಾನದ ಪ್ರಕಾರ ಗಣಕಯಂತ್ರಗಳು+ಪ್ರಿಂಟರ್+ಯು.ಪಿ.ಎಸ್. ಗಳನ್ನು ಖರೀದಿಸಲು ಸಣ್ಣ ನೀರಾವರಿ ದಕ್ಷಿಣ ವಲಯಕ್ಕೆ ರೂ.5.00 ಲಕ್ಷಗಳನ್ನು ಮತ್ತು ಉತ್ತರ ವಲಯಕ್ಕೆ ರೂ.5.00 ಲಕ್ಷಗಳನ್ನು ಒಟ್ಟು ರೂ.10.00 ಲಕ್ಷಗಳನ್ನು (ಹತ್ತು ಲಕ್ಷ ರೂಪಾಯಿಗಳು ಮಾತ್ರ) ಮಂಜೂರು ಮಾಡಲಾಗಿದೆ.

ಗಣಕಯಂತ್ರಗಳನ್ನು ಅನುಬಂಧ-1ರಲ್ಲಿನ ಕಾನ್ ಫಿಗರೇಷನ್ ಪ್ರಕಾರ ಮತ್ತು ಪ್ರಿಂಟರ್ ಮತ್ತು ಯು.ಪಿ.ಎಸ್.ಗಳನ್ನು ಅನುಬಂಧ-2ರಲ್ಲಿನ ವಿಶಿಷ್ಟತೆಗಳನ್ವಯ (specifications) ಡಿ.ಜಿ.ಎಸ್. ಮತ್ತು ಡಿ (DGS & D rate contract) ರ ದರ ಕರಾರುಗಳ ಪ್ರಕಾರವೇ ಖರೀದಿಸತಕ್ಕದ್ದು.

ಈ ವೆಚ್ಚವನ್ನು 2005-06ನೇ ಸಾಲಿನ ಲೆಕ್ಕಶೀರ್ಷಿಕೆ 2702-80-052-1-221ರ ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್ ಪಿ 2003 ದಿನಾಂಕ: 12.06.2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎನ್. ಮಂಜುನಾಥ**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ANNEXURE-I**

**Desk Top Computer System Specification 23+27=50 Nos.**

| | |
|---|---|
| CPU | Intel P IV Processor or equivelent @ 3.0 GHz and above |
| Secondary cache memory | 1MB L2 cache, 800 MHz FSB. |
| Motherboard | Intel/ OEM Mother board |
| RAM | 512 MB DDR RAM 400 MHz upgradeable up to 4 GB on DIMM |
| Expansion slots | 2 PCI, 1 PCI Express x 1, 1 PCI Express x 16 slots |
| HDD | 1 x 80.0 GB PCI-IDE hard disk (7200 rpm) with ultra ATA 100 controller Card & SMART III enabled. |
| FDD | 1.44 MB 3.5" |
| CD ROM Drive | 52 x CD ROM drive or greater to support multimedia with external speakers & microphone. |
| Ports | 1 Parallel, 1 Serial, PS/2 Keyboard and Mouse-02, 4 USB |
| Graphics | Integrated Intel Extreme Graphics 2 through DVMT |
| Monitor | 15" MPR II Certified SVGA colour Monitor |
| NIC Card | Integrated 10/100/1000 |
| Keyboard | 107 Mechanical Keyboard (OEM make) with 50 million strokes |
| Mouse | Optical Mouse with pad |
| Cabinet | Micro ATX Mini tower |
| Anti Virus | Preloaded (Norton 2005/ Mac Fee) Latest version |
| Security | Built in BIOS password protection, user and supervisor password, Flash ROM write protection, Diskette drive boot control, Data Recovery Software. |
| Operating System | Windows XP Professional operating system preloaded with licence and recovery CD |
| Power supply | Min 160 W SMPS |
| Sound | Integrated high definition audio. |
| **Certifications** | |
| ISO 9001:2000 certification for manufacturing & design. | |
| Win XP or Win 2K OS certified and letter from Microsoft to this effect. | |
| DMI 2.0 Certification Linux Certificate (Linux Ready) | |
| MPR II Certified monitor | |
| ACPI Compliance Energy Star Compliance. | |
| 3 Years on site Comprehensive Warranty certificate from Manufacturer. | |

Inkjet Printer with following specification 23+27=50 Nos.
Upto 12 ppm (A4)
1200x1200 dpi output quality
Warranty-3 years on site
software:
M.S. Office XP standard version

**M.N. MANJUNATHA**
Under Secretary to Government,
Water Resources Department (Minor Irrigation)

**ANNEXURE-II**
**TECHNICAL SPECIFICATION FOR 500 VA UPS- ON LINE**

| | |
|---|---|
| Output Capacity | 500 VA |
| Input- DC Voltage | 12/ 24V |
| Output- AC Voltage<br>Phase<br>Frequency | 230 V, +3%<br><br>Single<br>50,+0.5% |
| Inverter Technology | PWM Full Bridge |
| Output Wave form | Sine Wave (Full Sine Wave) |
| Rated Power Factor | 0.80 |
| Audio Alarm | Warming Buzzer for Battery low & Overload |
| Back up | 30 minutes |
| Indications | Inverter ON<br>Mains ON |
| Protections<br>DC Fuse<br>Output over load<br>Trip facility | <br>Fuse in Battery path<br>Inverter trips<br>For overload<br>For short circuit<br>For battery low |
| Environmental<br>Tempearature<br>Humidity<br>Noise Level | <br>0 to 50 deg.C<br>20 to 90% non condensing<br><60 dB |
| Change over | Automatic less than 5 ms. |
| Inverter Efficiency | >80% |
| Inverter Cold Start Facility | Available |
| Input Voltage Range | 170 V- 270 V |
| Input Frequency | 50Hz + 3Hz |
| Testing | One sample to be tested in reputed laboratories like CPRI |
| Warranty | 3 years. |

**M.N. MANJUNATHA**
PR-565
Under Secretary to Government,
Water Resources Department (Minor Irrigation)

**ಸಹಕಾರ ಸಚಿವಾಲಯ**

**ವಿಷಯ:** ದಿ. ಮಾರ್ಕಂಡೇಯ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ಕಾಕತಿ, ಬೆಳಗಾವಿ, ಇದರ 2004-05ನೇ ಸಾಲಿನ ವಾರ್ಷಿಕ ಮಹಾ ಸಭೆಯನ್ನು ಮುಂದೂಡಲು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1)ರಡಿಯಲ್ಲಿ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** ಚೇರ್ ಮನ್, ದಿ ಮಾರ್ಕಂಡೇಯ ಸಹಕಾರಿ ಸಕ್ಕರೆ ಕಾರ್ಖಾನೆ (ಲಿ) ಕಾಕತಿ, ಇವರ ಪತ್ರ ಸಂಖ್ಯೆ: ಎಂ.ಸಿ.ಎಸ್.ಎಂ./ ವಾ.ಮ.ಸಭೆ- 2004-05/ 2005-06/ 505 ದಿನಾಂಕ: 25.02.2006 ಮತ್ತು 07.03.2006.

**ಪ್ರಸ್ತಾವನೆ:**

ಚೇರ್ ಮನ್, ದಿ ಮಾರ್ಕಂಡೇಯ ಸಹಕಾರಿ ಸಕ್ಕರೆ ಕಾರ್ಖಾನೆ (ಲಿ) ಕಾಕತಿ, ಇವರು ಮೇಲೆ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ ಕಾರ್ಖಾನೆಯ ಮಹಾಸಭೆಯನ್ನು ಸಹಕಾರ ಸಂಘಗಳ ನಿಬಂಧಕರು, ದಿನಾಂಕ: 31.03.2006 ರವರೆಗೆ ಮುಂದುವರಿಸಿರುತ್ತಾರೆ. ಸದರಿ ಕಾರ್ಖಾನೆಯ 2004-05ನೇ ಸಾಲಿನ ವಾರ್ಷಿಕ ಮಹಾ ಸಭೆಯನ್ನು ದಿನಾಂಕ: 31.03.2006 ರೊಳಗಾಗಿ ಜರುಗಿಸಬೇಕಾಗಿರುತ್ತದೆ. ಪ್ರಸ್ತುತ ಕಾರ್ಖಾನೆಯ ಸಿವಿಲ್ ಕಾಮಗಾರಿಗಳು, ಯಂತ್ರೋಪಕರಣಗಳ ಸರಬರಾಜು ಹಾಗೂ ಜೋಡಣೆ ಕಾರ್ಯಗಳನ್ನು ಹಮ್ಮಿಕೊಳ್ಳಲಾಗಿದ್ದು, ಕಾರ್ಖಾನೆಯ ಸಕ್ಕರೆ ಘಟಕವನ್ನು ದಿನಾಂಕ: 2006-07ನೇ ಸಾಲಿನ ಹಂಗಾಮಿನಲ್ಲಿ ಪ್ರಾರಂಭಿಸಲು ಉದ್ದೇಶಿಸಲಾಗಿದೆ, ಹಾಗೂ ಕಾರ್ಖಾನೆಗೆ ಸಮೂಹ ಬ್ಯಾಂಕುಗಳಿಂದ ಅವಧಿ ಸಾಲವನ್ನು ಬಿಡುಗಡೆ ಮಾಡಿಸಿಕೊಳ್ಳಲು ಪ್ರಯತ್ನ ಮಾಡಲಾಗುತ್ತಿದ್ದು, ಮತ್ತು ಕಾರ್ಖಾನೆಯ ಸಹ ವಿದ್ಯುತ್ ಯೋಜನೆಗೆ ಅವಶ್ಯವಿರುವ ಸದಸ್ಯರ ಪಾಲು ಬಂಡವಾಳವನ್ನು ಕ್ರೋಢೀಕರಿಸುವಲ್ಲಿ ಕಾರ್ಖಾನೆಯ ಆಡಳಿತ ಮಂಡಳಿಯವರು ಹಾಗೂ ಸಿಬ್ಬಂದಿ ವರ್ಗದವರು ಕಾರ್ಯಮಗ್ನರಾಗಿದ್ದಾರೆ. ಆದ್ದರಿಂದ ಕಾರ್ಖಾನೆಯ ವಾರ್ಷಿಕ ಮಹಾ ಸಭೆಯನ್ನು ದಿನಾಂಕ: 31.03.2006ರ ಒಳಗಾಗಿ ಜರುಗಿಸುವ ಬದಲು ದಿನಾಂಕ: 30.09.2006ರೊಳಗೆ ಜರುಗಿಸುವ ಬಗ್ಗೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 121 ರಡಿ 6 ತಿಂಗಳ ಅವಧಿಗೆ ವಿಸ್ತರಿಸಿ ಮಹಾ ಸಭೆಯನ್ನು ಮುಂದೂಡುವ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಇ 73 ಸಸಕಾ 2006, ಬೆಂಗಳೂರು, ದಿನಾಂಕ:20ನೇ ಮಾರ್ಚ್, 2006**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ದಿ ಮಾರ್ಕಂಡೇಯ ಸಹಕಾರಿ ಸಕ್ಕರೆ ಕಾರ್ಖಾನೆ (ನಿ), ಕಾಕತಿ, ಬೆಳಗಾಂ, ಇದರ 2004-05ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ದಿನಾಂಕ: 30.09.2006ರವರೆಗೆ ಕಾಲಾವಕಾಶ ನೀಡಲು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1)ರ ಉಪಬಂಧಗಳು ಈ ಕೆಳಗಿನ ಮಾರ್ಪಾಡುಗಳೊಂದಿಗೆ ಅನ್ವಯವಾಗುತ್ತದೆ ಎಂದು ನಿರ್ದೇಶಿಸುತ್ತದೆ. ಎಂದರೆ

**27ರ ಪ್ರಕರಣದಲ್ಲಿ**

27ನೇ ಪ್ರಕರಣದ ಉಪ ಪ್ರಕರಣ (1) ಪರಂತುಕದಲ್ಲಿನ ಆರು ತಿಂಗಳು ಎಂಬ ಪದಗಳಿಗೆ ಬದಲಾಗಿ ಹನ್ನೆರಡು ತಿಂಗಳು ಎಂಬ ಪದವನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ:** ಪ್ರಕರಣ 27(1)ಕ್ಕೆ ಮಾಡಿದ ಮಾರ್ಪಾಡು ದಿನಾಂಕ: 30.09.2006ರ ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 27(1)ಕ್ಕೆ ಪ್ರಕರಣದ ಉಪಬಂಧಕಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಾಣದ ರಂಗಪ್ಪ**

ಪಿ.ಆರ್.566

ಸರ್ಕಾರದ ಅಧೀನ ಕಾರ್ಯದರ್ಶಿ,

ಸಹಕಾರ ಇಲಾಖೆ.

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ:** ಶ್ರೀ ಆರ್.ಟಿ. ಕೃಷ್ಣಮೂರ್ತಿ, ನೋಟರಿ, ಬೆಂಗಳೂರು ಇವರ ವಿರುದ್ಧ ಶಿಸ್ತಿನ ಕ್ರಮ ಜರುಗಿಸುವ ಬಗ್ಗೆ.

**ಓದಲಾಗಿದೆ:** ಪತ್ರ ಸಂಖ್ಯೆ: ಸಿಓಎಂಪಿಟಿ: ಯುಪಿಲೋಕ: ಬಿಸಿಡಿ: 200:2005: ಎಆರ್ಇ-3 ದಿನಾಂಕ: 20.04.2005.

**ಪ್ರಸ್ತಾವನೆ:**

ಶ್ರೀ ಶಾಂತ ಚನ್ನೇಗೌಡ, ಬಿ.ವಿ.ಎಸ್. ರೆಡ್ಡಿ ಹಾಗೂ ಶ್ರೀ ಗೆರಾಲ್ಡ್ ಡಿಸೋಜಾ ಎಂಬ ವ್ಯಕ್ತಿಗಳು ದಿನಾಂಕ: 12.02.2005ರಂದು ಮಾನ್ಯ ಲೋಕಾಯುಕ್ತ ಇವರಿಗೆ ಮನವಿ ಸಲ್ಲಿಸುತ್ತಾ ಶ್ರೀ ಕೃಷ್ಣಮೂರ್ತಿ ನೋಟರಿ ಇವರ ವಿರುದ್ಧ ಈ ಕೆಳಗಿನ ದೂರುಗಳನ್ನು ನೀಡಿದ್ದರು:

- ಖಾಲಿ ಛಾಪಾ ಕಾಗದದ ಮೇಲೆ ಅರ್ಜಿದಾರರ ಸಹಿ ಇಲ್ಲದೇ ಇದ್ದಾಗ್ಯೂ ಅವುಗಳನ್ನು ದೃಢೀಕರಿಸಿ ಅವರ ಸೀಲು ಮತ್ತು ಸಹಿ ಮಾಡುವುದು.
- ದೃಢೀಕರಿಸುವ ಅಫಿಡವಿಟ್‌ಗಳಿಗೆ ನಿಗದಿತ ಪ್ರಮಾಣಕ್ಕಿಂತ ಹೆಚ್ಚು ಶುಲ್ಕವನ್ನು ವಸೂಲಿ ಮಾಡಿ ನಿಯಮ ಉಲ್ಲಂಘಿಸಿರುವುದು.
- ಅಫಿಡವಿಟ್‌ಗಳಲ್ಲಿ ಪ್ರಮಾಣಕಾರನ ಸಹಿಯಾಗಲಿ, ಅರ್ಜಿದಾರರ ಸಹಿಯಾಗಲಿ, ಗುರುತಿಸುವವರ ಸಹಿಯಾಗಲಿ ಯಾವುದೇ ಇಲ್ಲದಿದ್ದಾಗ್ಯೂ ಖಾಲಿ ಪ್ರಮಾಣ ಪತ್ರಗಳನ್ನು ದೃಢೀಕರಿಸುವ ಪ್ರವೃತ್ತಿ ಹೊಂದಿರುವುದು.

ಈ ಕುರಿತಂತೆ ಮೇಲೆ ಓದಲಾದ ಪತ್ರ ಬರೆಯುತ್ತಾ ಹೆಚ್ಚುವರಿ ವಿಚಾರಣೆ ನಿಬಂಧಕರು-3, ಕರ್ನಾಟಕ ಲೋಕಾಯುಕ್ತ, ಇವರು ನಿಯಮಗಳ ರೀತ್ಯಾ ಸೂಕ್ತ ಕ್ರಮ ಜರುಗಿಸುವಂತೆ ಕೋರಿರುತ್ತಾರೆ.

ಈ ಮೇರೆಗೆ ಪರಿಶೀಲಿಸಿ ಸರ್ಕಾರ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 53 ಎಲ್‌ಸಿಎಲ್ 2005, ಬೆಂಗಳೂರು, ದಿನಾಂಕ:3ನೇ ಏಪ್ರಿಲ್, 2006**

ಶ್ರೀ ಆರ್.ಟಿ. ಕೃಷ್ಣಮೂರ್ತಿ, ನೋಟರಿ, ಬೆಂಗಳೂರು ಇವರ ವಿರುದ್ಧದ ದೂರುಗಳ ಕುರಿತಂತೆ ವಿಚಾರಣೆ ನಡೆಸುವುದನ್ನು ಬಾಕಿ ಇಟ್ಟು ನೋಟರಿ ನಿಯಮಗಳ (1956) ನಿಯಮ 13(12)(ಬಿ) (ii) ರಲ್ಲಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಸರ್ಕಾರ ಈ ಕೂಡಲೇ ಜಾರಿಗೆ ಬರುವಂತೆ ಮುಂದಿನ ಆದೇಶದವರೆಗೆ ಸದರಿ ನೋಟರಿಯವರನ್ನು ಅಮಾನತ್ತುಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಕುಂತಲ ಹೆಚ್.ಆರ್.**

ಪಿ.ಆರ್.567

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2),

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

## ಸಮಾಜ ಕಲ್ಯಾಣ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಸಕಇ 61 ಪಕಸೇ 2006, ಬೆಂಗಳೂರು, ದಿನಾಂಕ: 27ನೇ ಮಾರ್ಚ್, 2006**

ಇದೇ ಸರ್ಕಾರಿ ಆದೇಶ ಸಮಸಂಖ್ಯೆ: ದಿನಾಂಕ: 25.03.2006ರ ಆದೇಶ ಭಾಗದ 6ನೇ ಸಾಲಿನಲ್ಲಿ ನಮೂದಿಸಿರುವ ನಿಯಮ 10(1)(ಎ) ರಡಿಯಲ್ಲಿ ಎಂಬುದರ ಬದಲಾಗಿ ನಿಯಮಾವಳಿಗಳ ನಿಯಮ 10(1)(ಡಿ)ರಡಿಯಲ್ಲಿ ಎಂಬುದಾಗಿ ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಕುಂತಲ ಹೆಚ್.ಆರ್.**

ಪಿ.ಆರ್.568

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2),

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**EDUCATION SECRETARIAT**

**Subject:** Release of 2nd Instalment to Meet Cooking cost under NP-NSPE-2004 For the period from 01.01.2006 to 30.06.2006.

**Read:** 1. Govt. of India letter D.O. No: F.17-(10) 2005/ Desk MDM) Dated: 12.12.2005.
2. Govt. letter No: ED 04 MMS 2005 Dated: 27.12.2005.
3. Govt. of India letter No. F.17-(10) 2005/ Desk (MDM) Dated: 24.01.2006.

**Preamble:**

In Government of India letter Dated: 12.12.2005 read at (1) above it was directed to send the proposal for release of 2nd instalment of cooking cost under NP-NSPE 2004 for the period from 01.01.2006 to 30.06.2006. In State Government letter Dated: 27.12.2005 read at above (2) a proposal accordingly was sent for release of second Instalment from Government of India. After considering the proposal Government of India has released Rs.3950.31 lakhs vide their letter Dated: 24.01.2006 read at (3) above to meet cooking cost for the period from 01.01.2006 to 30.06.2006 under NP-NSPE 2004. The Government has considered further release of said amount and orders as follows:

**Order No. ED 04 MMS 2005, Bangalore, Dated: 25th March, 2006**
**[ED 24 Swimara (UNIQUE) 2006, Dated: 25-03-2006]**

Sanction is accorded to release Rs.3950-31 lakh (Rupees Thirty nine crore fifty lakhs and thirty one thousand only) as 2nd instalment to meet cooking cost for the period from 01.01.2006 to 30.06.2006 under NP-NSPE Mid-Day Meal Scheme.

The expenditure on this account shall be debitable to the Head of Account 2202-01-800-1-35 (District sector).

This order issues in confirmation with credit confirmation slip No.FD 227 FRC 2006 Dated: 28.02.2006 issued by Finance Department vide their D.O. letter No. FD 81 BGL 2005 Dated: 01.03.2006.

By Order and in the name of the Governor of Karnataka,
**K. SRIKANTESHWARA**
Special Officer & Ex-Officio,
Joint Secretary to Government (Planning)
Education Department.

PR-572

**ಒಳಾಡಳಿತ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ: ಒಇ 163 ಪಿಪಿಇ 2006, ಬೆಂಗಳೂರು, ದಿನಾಂಕ:5ನೇ ಏಪ್ರಿಲ್, 2006**

ಸರ್ಕಾರಿ ಆದೇಶ ಸಂಖ್ಯೆ: ಒಇ 424 ಪಿಪಿಇ 2005(1) ದಿನಾಂಕ: 12.05.2005ರ ಅಧಿಸೂಚನೆಯಲ್ಲಿನ ತಃಖ್ತೆಯ ಕ್ರಮ ಸಂಖ್ಯೆ (23)ರ ಅಂಕಣ (5)ರಲ್ಲಿ ನಮೂದಿಸಿರುವ '1ನೇ ಅಪರ ಸರ್ಕಾರಿ ಅಭಿಯೋಜಕರು, 1ನೇ ಅಪರ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ತುಮಕೂರು' ಎಂಬುದರ ಬದಲಾಗಿ '2ನೇ ಅಪರ ಸರ್ಕಾರಿ ಅಭಿಯೋಜಕರು, 2ನೇ ಅಪರ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ತುಮಕೂರು' ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಇದರ ಹೊರತಾಗಿ ಸದರಿ ಅಧಿಸೂಚನೆಯಲ್ಲಿ ಬೇರೆ ಯಾವ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಕಾ. ಮತ್ತು ಸು. ಮತ್ತು ಕಾಫಿಪೋಸ ಮತ್ತು ಅಭಿಯೋಗ).

ಪಿ.ಆರ್.575

**ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ**

**ಸೇರ್ಪಡೆ ಆದೇಶ**

**ಸಂಖ್ಯೆ: ಸಂಕಇ 3 ಕರಾಗೆ 2006, ಬೆಂಗಳೂರು, ದಿನಾಂಕ:6ನೇ ಏಪ್ರಿಲ್, 2006**

ಸರ್ಕಾರದ ಆದೇಶ ಸಂಖ್ಯೆ: ಸಂಕಇ 36 ಕರಾಗೆ 2004 ದಿನಾಂಕ: 25.05.2005ರ ಆದೇಶ ಭಾಗದ ಕ್ರಮ ಸಂಖ್ಯೆ: 6ರಲ್ಲಿರುವ "ಡಾ: ಶಂಕರ ಖಂಡೇರಿ, ನಿವೃತ್ತ ನ್ಯಾಯಾಧೀಶರು, ದರ್ಬೆ, ಪುತ್ತೂರು-574202- ಸದಸ್ಯರು", ಎಂಬುವವರ ಬದಲಿಗೆ "ಪ್ರೋ: ಎಂ.ರಾಮಚಂದ್ರ, ನಿವೃತ್ತ ಕನ್ನಡ ಪ್ರಾಧ್ಯಾಪಕರು, ಉಡುಪಿ" ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ದಕ್ಷಿಣ ಕನ್ನಡ ಜಿಲ್ಲಾ ಗ್ಯಾಸೆಟಿಯರ್ ಸಲಹಾ ಸಮಿತಿಯ ಸದಸ್ಯರನ್ನಾಗಿ ಸೇರ್ಪಡೆ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ವಿಶಾಲಾಕ್ಷಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ ಇಲಾಖೆ (ಆಡಳಿತ ಕನ್ನಡ).

ಪಿ.ಆರ್.576

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಪಿ.ಎಸ್. ಸುದರ್ಶನ್, ಪಿ.ಎಸ್.ಐ., ಬಾಗೇಪಲ್ಲಿ ಪೊಲೀಸ್ ಠಾಣೆ, ಕೋಲಾರ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:** (1) ಶಿಸ್ತು ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೇಂದ್ರವಲಯ, ಬೆಂಗಳೂರು, ಇವರ ಆದೇಶ ಸಂಖ್ಯೆ: ಪನ್ನಿ/ ಡಿಇ-11/ 99-2000, ಓಬಿ ಸಂಖ್ಯೆ: 99/99-2000, ದಿನಾಂಕ:21.12.1999.

(2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ: ಅಪೀಲು/ 1/ 6/ 2000-2001, ದಿನಾಂಕ: 29.07.2001/ 01.08.2001.

(3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 10.12.2004.

(4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಅಪೀಲು 2/15/2005, ದಿನಾಂಕ: 14.11.2005.

**ಪ್ರಸ್ತಾವನೆ:**

ಶ್ರೀ ಪಿ.ಎಸ್. ಸುದರ್ಶನ್, ಪಿಎಸ್ಐ, ಬಾಗೇಪಲ್ಲಿ ಪೊಲೀಸ್ ಠಾಣೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ದೋಷಾರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷಾರೋಪಣೆ:**

"ಅರಣ್ಯ ಕಾಯಿದೆ ತಕ್ಲೀರಿನಲ್ಲಿ ಶಾಮೀಲಾಗಿ, ಅಧಿಕಾರವನ್ನು ದುರುಪಯೋಗಪಡಿಸಿ, ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ ಮತ್ತು ಅಧಿಕಾರ ದುರುಪಯೋಗ ಪಡಿಸಿ, ದುರ್ನಡತೆ ಎಸಗಿರುವ ಬಗ್ಗೆ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೇಂದ್ರ ವಲಯ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 21.12.1999ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆ ಆಗದಂತೆ ಎರಡು ವರ್ಷಗಳ ಅವಧಿಗೆ ತಡೆ ಹಿಡಿಯಲಾಗಿದೆ ಎಂಬ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದೂ ಆದರೂ ಅರ್ಜಿದಾರರ ಮೇಲೆ ದಾಕ್ಷಿಣ್ಯ ತೋರಿ ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 29.07.2001/ 01.08.2001ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರಿಯ ಆದೇಶವನ್ನು ಮಾರ್ಪಡಿಸಿ, ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆ ಆಗದಂತೆ ಒಂದು ವರ್ಷ ಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದೋಷಾರೋಪಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅರಣ್ಯ ಇಲಾಖೆ ಕಾಯಿದೆ ತಕ್ಲೀರಿನಲ್ಲಿ ಶಾಮೀಲಾಗಿ ಅಧಿಕಾರ ದುರುಪಯೋಗಪಡಿಸಿಕೊಂಡಿರುವುದು ದಾಖಲೆಗಳಿಂದ ಹಾಗೂ ಸಾಕ್ಷಿಗಳಿಂದ ದೃಢಪಟ್ಟಿದ್ದು, ಶಿಸ್ತು ಪ್ರಾಧಿಕಾರಿ ವಿಧಿಸಿರುವ ದಂಡನಾದೇಶವನ್ನು ಮೇಲ್ಮನವಿ ಪ್ರಾಧಿಕಾರಿ ಕಡಿಮೆಗೊಳಿಸಿರುತ್ತಾರೆ. ಆದ್ದರಿಂದ ಮೇಲ್ಮನವಿ ಪ್ರಾಧಿಕಾರಿ ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

### ಸರ್ಕಾರದ ಆದೇಶ ಸಂಖ್ಯೆ: ಒಇ 19 ಪೊಸಿಅ 2005, ಬೆಂಗಳೂರು, ದಿನಾಂಕ:25ನೇ ಮಾರ್ಚ್, 2006

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಪಿ.ಎಸ್. ಸುದರ್ಶನ್, ಪಿಎಸ್ಐ ಬಾಗೇಪಲ್ಲಿ ಪೊಲೀಸ್ ಠಾಣೆ, ಕೋಲಾರ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ: 10.12.2004ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಬಸವರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

ಪಿ.ಆರ್.577

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** 2005ನೇ ಸಾಲಿನ 'ಡಾ: ಗುಬ್ಬಿ ವೀರಣ್ಣ' ಪ್ರಶಸ್ತಿಯನ್ನು ನೀಡುವ ಬಗ್ಗೆ.

**ಓದಲಾಗಿದೆ:** (1) ಸರ್ಕಾರದ ಆದೇಶ ಸಂಖ್ಯೆ: ಸಂಕಇ 369 ಕಸಧ 2005, ದಿನಾಂಕ: 03.11.2005.

(2) ಕನ್ನಡ ಮತ್ತು ಸಂಸ್ಕೃತಿ ನಿರ್ದೇಶಕರ ಅ.ಸ.ಪ.ಕ್ರ. ಕಸನಿ/ 4/ ಡಾ: ಗುವಿಪ್ರ/ 2005-06, ದಿನಾಂಕ: 23.02.2006.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ 2005ನೇ ಸಾಲಿನ 'ಡಾ: ಗುಬ್ಬಿ ವೀರಣ್ಣ' ಪ್ರಶಸ್ತಿಗೆ ಅರ್ಹರಾದವರನ್ನು ಆಯ್ಕೆ ಮಾಡಲು ಆಯ್ಕೆ ಸಮಿತಿಯನ್ನು ರಚಿಸಲಾಗಿತ್ತು. ದಿನಾಂಕ: 02.02.2006 ಮತ್ತು ದಿನಾಂಕ: 16.02.2006ರಂದು ಸದರಿ ಆಯ್ಕೆ ಸಮಿತಿಯ ಸಭೆ ಸೇರಿ, ವೃತ್ತಿರಂಗಭೂಮಿಗೆ ಸುದೀರ್ಘ ಕಾಲ ತಮ್ಮನ್ನು ತೊಡಗಿಸಿಕೊಂಡು ಅನುಪಮ ಸೇವೆಯನ್ನು ಸಲ್ಲಿಸುತ್ತಾ ಬಂದಿರುವ ಹೆಸರಾಂತ ಕಲಾವಿದರಾದ **ಶ್ರೀಮತಿ ರೇಣುಕಮ್ಮ ಮುರಗೋಡು, ಸವದತ್ತಿ, ಬೆಳಗಾಂ ಜಿಲ್ಲೆ,** ಅವರನ್ನು ಆಯ್ಕೆ ಸಮಿತಿಯು ಒಮ್ಮತದಿಂದ 2005ನೇ ಸಾಲಿನ 'ಡಾ: ಗುಬ್ಬಿ ವೀರಣ್ಣ' ಪ್ರಶಸ್ತಿಗೆ

ಆಯ್ಕೆ ಮಾಡಿದ್ದು, ಆಯ್ಕೆ ಸಮಿತಿಯ ಆಯ್ಕೆಯನ್ನು ಒಪ್ಪಿ ಈ ಸಂಬಂಧ ಸರ್ಕಾರಿ ಆದೇಶ ಹೊರಡಿಸುವಂತೆ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶಕರು ಕೋರಿದ್ದಾರೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 369 ಕಸಧ 2005, ಬೆಂಗಳೂರು, ದಿನಾಂಕ:4ನೇ ಏಪ್ರಿಲ್, 2006**

2005ನೇ ಸಾಲಿನ 'ಡಾ: ಗುಬ್ಬಿ ವೀರಣ್ಣ' ಪ್ರಶಸ್ತಿಗೆ ವೃತ್ತಿ ರಂಗಭೂಮಿಗೆ ಸುದೀರ್ಘ ಕಾಲ ತಮ್ಮನ್ನು ತೊಡಗಿಸಿಕೊಂಡು ಅನುಪಮ ಸೇವೆಯನ್ನು ಸಲ್ಲಿಸುತ್ತಾ ಬಂದಿರುವ ಹೆಸರಾಂತ ಕಲಾವಿದರಾದ **ಶ್ರೀಮತಿ ರೇಣುಕಮ್ಮ ಮುರಗೋಡು, ಸವದತ್ತಿ, ಬೆಳಗಾಂ ಜಿಲ್ಲೆ.** ಇವರನ್ನು ಸರ್ಕಾರವು ಆಯ್ಕೆ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಉಷಾ ಗಣೇಶ್**
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

ಪಿ.ಆರ್.578

**ವಿಷಯ:** 2005ನೇ ಸಾಲಿನ 'ಜಕಣಾಚಾರಿ' ಪ್ರಶಸ್ತಿಯನ್ನು ನೀಡುವ ಬಗ್ಗೆ.

**ಓದಲಾಗಿದೆ:** (1) ಸರ್ಕಾರದ ಆದೇಶ ಸಂಖ್ಯೆ: ಸಂಕಇ 370 ಕಸಧ 2005, ದಿನಾಂಕ: 03.11.2005.
(2) ಕನ್ನಡ ಮತ್ತು ಸಂಸ್ಕೃತಿ ನಿರ್ದೇಶಕರ ಅ.ಸ.ಪ.ಕ್ರ. ಕಸನಿ/ 9/ ಜ.ಚಾ.ಪ್ರ./ 2004-05, ದಿನಾಂಕ:03.02.2006.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ 2005ನೇ ಸಾಲಿನ 'ಜಕಣಾಚಾರಿ' ಪ್ರಶಸ್ತಿಗೆ ಅರ್ಹರಾದವರನ್ನು ಆಯ್ಕೆ ಮಾಡಲು ಆಯ್ಕೆ ಸಮಿತಿಯನ್ನು ರಚಿಸಲಾಗಿತ್ತು. ದಿನಾಂಕ:18.01.2006 ಮತ್ತು ದಿನಾಂಕ:30.01.2006ರಂದು ಸದರಿ ಆಯ್ಕೆ ಸಮಿತಿಯ ಸಭೆ ಸೇರಿ, ತಜ್ಞರ ಅಭಿಪ್ರಾಯಗಳನ್ನು ಪರಿಶೀಲಿಸಿ, ಸುದೀರ್ಘ ಚರ್ಚೆಯ ನಂತರ ಶಿಲ್ಪತಜ್ಞ **ಶ್ರೀ ಸಿ. ಸಿದ್ಧಲಿಂಗಯ್ಯ, ಮೈಸೂರು** ಅವರನ್ನು ಆಯ್ಕೆ ಸಮಿತಿಯು ಒಮ್ಮತದಿಂದ 2005ನೇ ಸಾಲಿನ 'ಜಕಣಾಚಾರಿ' ಪ್ರಶಸ್ತಿಗೆ ಆಯ್ಕೆ ಮಾಡಿದ್ದು, ಆಯ್ಕೆ ಸಮಿತಿಯ ಆಯ್ಕೆಯನ್ನು ಒಪ್ಪಿ ಈ ಸಂಬಂಧ ಸರ್ಕಾರಿ ಆದೇಶ ಹೊರಡಿಸುವಂತೆ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶಕರು ಕೋರಿದ್ದಾರೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 370 ಕಸಧ 2005, ಬೆಂಗಳೂರು, ದಿನಾಂಕ:4ನೇ ಏಪ್ರಿಲ್, 2006**

2005ನೇ ಸಾಲಿನ 'ಜಕಣಾಚಾರಿ' ಪ್ರಶಸ್ತಿಗೆ ಶಿಲ್ಪತಜ್ಞ **ಶ್ರೀ ಸಿ.ಸಿದ್ಧಲಿಂಗಯ್ಯ, ಮೈಸೂರು,** ಇವರನ್ನು ಸರ್ಕಾರವು ಆಯ್ಕೆ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಉಷಾ ಗಣೇಶ್**
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

ಪಿ.ಆರ್.579

**ವಿಷಯ:** 2005ನೇ ಸಾಲಿನ 'ದಾನ ಚಿಂತಾಮಣಿ' ಪ್ರಶಸ್ತಿಯನ್ನು ನೀಡುವ ಬಗ್ಗೆ.

**ಓದಲಾಗಿದೆ:** (1) ಸರ್ಕಾರದ ಆದೇಶ ಸಂಖ್ಯೆ: ಸಂಕಇ 372 ಕಸಧ 2005, ದಿನಾಂಕ: 03.11.2005.
(2) ಕನ್ನಡ ಮತ್ತು ಸಂಸ್ಕೃತಿ ನಿರ್ದೇಶಕರ ಅ.ಸ.ಪ.ಕ್ರ. ಕಸನಿ/ 10/ ದಾ.ಚಿ.ಪ್ರ./ 2005-06, ದಿನಾಂಕ:06.02.2006.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ 2005ನೇ ಸಾಲಿನ 'ದಾನ ಚಿಂತಾಮಣಿ' ಪ್ರಶಸ್ತಿಗೆ ಅರ್ಹರಾದವರನ್ನು ಆಯ್ಕೆ ಮಾಡಲು ಆಯ್ಕೆ ಸಮಿತಿಯನ್ನು ರಚಿಸಲಾಗಿತ್ತು. ದಿನಾಂಕ:23.01.2006 ಮತ್ತು ದಿನಾಂಕ:06.02.2006ರಂದು ಸದರಿ ಆಯ್ಕೆ ಸಮಿತಿಯ ಸಭೆ ಸೇರಿ, ಸಾಹಿತ್ಯ ಕ್ಷೇತ್ರದಲ್ಲಿ ವಿಶಿಷ್ಟ ಕೊಡುಗೆಯನ್ನು ನೀಡಿರುವ **ಡಾ: ವೀಣಾ ಶಾಂತೇಶ್ವರ, ಧಾರವಾಡ,** ಅವರನ್ನು ಆಯ್ಕೆ ಸಮಿತಿಯು ಒಮ್ಮತದಿಂದ 2005ನೇ ಸಾಲಿನ 'ದಾನ ಚಿಂತಾಮಣಿ' ಪ್ರಶಸ್ತಿಗೆ ಆಯ್ಕೆ ಮಾಡಿದ್ದು, ಆಯ್ಕೆ ಸಮಿತಿಯ ಆಯ್ಕೆಯನ್ನು ಒಪ್ಪಿ ಈ ಸಂಬಂಧ ಸರ್ಕಾರಿ ಆದೇಶ ಹೊರಡಿಸುವಂತೆ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶಕರು ಕೋರಿದ್ದಾರೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 372 ಕಸಧ 2005, ಬೆಂಗಳೂರು, ದಿನಾಂಕ:4ನೇ ಏಪ್ರಿಲ್, 2006**

2005ನೇ ಸಾಲಿನ 'ದಾನ ಚಿಂತಾಮಣಿ' ಪ್ರಶಸ್ತಿಗೆ ಸಾಹಿತ್ಯ ಕ್ಷೇತ್ರದಲ್ಲಿ ವಿಶಿಷ್ಟ ಕೊಡುಗೆಯನ್ನು ನೀಡಿರುವ **ಡಾ: ವೀಣಾ ಶಾಂತೇಶ್ವರ, ಧಾರವಾಡ,** ಇವರನ್ನು ಸರ್ಕಾರವು ಆಯ್ಕೆ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಉಷಾ ಗಣೇಶ್**
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

ಪಿ.ಆರ್.580

**ವಿಷಯ:** 2005ನೇ ಸಾಲಿನ 'ಶಾಂತಲಾ ನಾಟ್ಯ' ಪ್ರಶಸ್ತಿಯನ್ನು ನೀಡುವ ಬಗ್ಗೆ.

**ಓದಲಾಗಿದೆ:** (1) ಸರ್ಕಾರದ ಆದೇಶ ಸಂಖ್ಯೆ: ಸಂಕಇ 373 ಕಸಧ 2005, ದಿನಾಂಕ: 03.11.2005.
(2) ಕನ್ನಡ ಮತ್ತು ಸಂಸ್ಕೃತಿ ನಿರ್ದೇಶಕರ ಅ.ಸ.ಪ.ಕ್ರ. ಕಸನಿ/ ಶಾಂ.ನಾ.ಪ್ರ/ 8 / 2005-06, ದಿನಾಂಕ:03.02.2006.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ 2005ನೇ ಸಾಲಿನ 'ಶಾಂತಲಾ ನಾಟ್ಯ' ಪ್ರಶಸ್ತಿಗೆ ಅರ್ಹರಾದವರನ್ನು ಆಯ್ಕೆ ಮಾಡಲು ಆಯ್ಕೆ ಸಮಿತಿಯನ್ನು ರಚಿಸಲಾಗಿತ್ತು. ದಿನಾಂಕ:18.01.2006 ಮತ್ತು ದಿನಾಂಕ:28.01.2006ರಂದು ಸದರಿ ಆಯ್ಕೆ ಸಮಿತಿಯ ಸಭೆ ಸೇರಿ, ನೃತ್ಯ ಕ್ಷೇತ್ರದಲ್ಲಿ ಅಪಾರ ಸೇವೆ ಸಲ್ಲಿಸಿರುವ **ಶ್ರೀಮತಿ ಲೀಲಾ ರಾಮನಾಥನ್, ಬೆಂಗಳೂರು,** ಅವರನ್ನು ಆಯ್ಕೆ ಸಮಿತಿಯು ಒಮ್ಮತದಿಂದ 2005ನೇ ಸಾಲಿನ 'ಶಾಂತಲಾ

ನಾಟ್ಯ' ಪ್ರಶಸ್ತಿಗೆ ಆಯ್ಕೆ ಮಾಡಿದ್ದು, ಆಯ್ಕೆ ಸಮಿತಿಯ ಆಯ್ಕೆಯನ್ನು ಒಪ್ಪಿ ಈ ಸಂಬಂಧ ಸರ್ಕಾರಿ ಆದೇಶ ಹೊರಡಿಸುವಂತೆ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶಕರು ಕೋರಿದ್ದಾರೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 373 ಕಸಧ 2005, ಬೆಂಗಳೂರು, ದಿನಾಂಕ:4ನೇ ಏಪ್ರಿಲ್, 2006**

2005ನೇ ಸಾಲಿನ 'ಶಾಂತಲಾ ನಾಟ್ಯ' ಪ್ರಶಸ್ತಿಗೆ ಸಾಹಿತ್ಯ ಕ್ಷೇತ್ರದಲ್ಲಿ, ಅಪರಾರ ಸೇವೆ ಸಲ್ಲಿಸಿರುವ **ಶ್ರೀಮತಿ ಲೀಲಾ ರಾಮನಾಥನ್, ಬೆಂಗಳೂರು,** ಇವರನ್ನು ಸರ್ಕಾರವು ಆಯ್ಕೆ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಉಷಾ ಗಣೇಶ್**

ಪಿ.ಆರ್.581

ಸರ್ಕಾರದ ಪ್ರಧಾನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

**ವಿಷಯ:** 2005ನೇ ಸಾಲಿನ 'ಸಂತ ಶಿಶುನಾಳ ಶರೀಫ್' ಪ್ರಶಸ್ತಿಯನ್ನು ನೀಡುವ ಬಗ್ಗೆ.

**ಓದಲಾಗಿದೆ:** (1) ಸರ್ಕಾರದ ಆದೇಶ ಸಂಖ್ಯೆ: ಸಂಕಇ 391 ಕಸಧ 2005, ದಿನಾಂಕ: 03.11.2005.

(2) ಕನ್ನಡ ಮತ್ತು ಸಂಸ್ಕೃತಿ ನಿರ್ದೇಶಕರ ಅ.ಸ.ಪ.ಕ್ರ. ಕಸನಿ/ 6/ ಸಂ.ಶಿ.ಶ.ಪ್ರ./ 2005-06, ದಿನಾಂಕ:03.02.2006.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ 2005ನೇ ಸಾಲಿನ 'ಸಂತ ಶಿಶುನಾಳ ಶರೀಫ್' ಪ್ರಶಸ್ತಿಗೆ ಅರ್ಹರಾದವರನ್ನು ಆಯ್ಕೆ ಮಾಡಲು ಆಯ್ಕೆ ಸಮಿತಿಯನ್ನು ರಚಿಸಲಾಗಿತ್ತು. ದಿನಾಂಕ:17.01.2006 ಮತ್ತು ದಿನಾಂಕ:01.02.2006ರಂದು ಸದರಿ ಆಯ್ಕೆ ಸಮಿತಿಯ ಸಭೆಸೇರಿ ಸಭೆಯು ತಜ್ಞರ ಅಭಿಪ್ರಾಯಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಹಿರಿಯ ಕಲಾವಿದರು, ಸುಗಮ ಸಂಗೀತ ಕ್ಷೇತ್ರದಲ್ಲಿ ಜನಪ್ರಿಯರಾಗಿರುವ **ಶ್ರೀ ಈಶ್ವರಪ್ಪ ಜಿ. ಮಿಣಚಿ, ಗೋಕಾಕ್,** ಅವರನ್ನು ಆಯ್ಕೆ ಸಮಿತಿಯು ಒಮ್ಮತದಿಂದ 2005ನೇ ಸಾಲಿನ 'ಸಂತ ಶಿಶುನಾಳ ಶರೀಫ್' ಪ್ರಶಸ್ತಿಗೆ ಆಯ್ಕೆ ಮಾಡಿದ್ದು, ಆಯ್ಕೆ ಸಮಿತಿಯ ಆಯ್ಕೆಯನ್ನು ಒಪ್ಪಿ ಈ ಸಂಬಂಧ ಸರ್ಕಾರಿ ಆದೇಶ ಹೊರಡಿಸುವಂತೆ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶಕರು ಕೋರಿದ್ದಾರೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 391 ಕಸಧ 2005, ಬೆಂಗಳೂರು, ದಿನಾಂಕ:4ನೇ ಏಪ್ರಿಲ್, 2006**

2005ನೇ ಸಾಲಿನ 'ಸಂತ ಶಿಶುನಾಳ ಶರೀಫ್' ಪ್ರಶಸ್ತಿಗೆ ಹಿರಿಯ ಕಲಾವಿದರು, ಸುಗಮ ಸಂಗೀತ ಕ್ಷೇತ್ರದಲ್ಲಿ ಜನಪ್ರಿಯರಾಗಿರುವ **ಶ್ರೀ ಈಶ್ವರಪ್ಪ ಜಿ. ಮಿಣಚಿ, ಗೋಕಾಕ್,** ಇವರನ್ನು ಸರ್ಕಾರವು ಆಯ್ಕೆ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಉಷಾ ಗಣೇಶ್**

ಪಿ.ಆರ್.582

ಸರ್ಕಾರದ ಪ್ರಧಾನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

**ವಿಷಯ:** 2005ನೇ ಸಾಲಿನ 'ಟಿ. ಚೌಡಯ್ಯ ರಾಷ್ಟ್ರೀಯ' ಪ್ರಶಸ್ತಿಯನ್ನು ನೀಡುವ ಬಗ್ಗೆ.

**ಓದಲಾಗಿದೆ:** (1) ಸರ್ಕಾರದ ಆದೇಶ ಸಂಖ್ಯೆ: ಸಂಕಇ 392 ಕಸಧ 2005, ದಿನಾಂಕ: 03.11.2005.

(2) ಕನ್ನಡ ಮತ್ತು ಸಂಸ್ಕೃತಿ ನಿರ್ದೇಶಕರ ಅ.ಸ.ಪ.ಕ್ರ. ಕಸನಿ/ 11/ ಟಿ.ಚೌ.ಪ್ರ./ 2005-06, ದಿನಾಂಕ:03.02.2006.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ 2005ನೇ ಸಾಲಿನ 'ಟಿ.ಚೌಡಯ್ಯ ರಾಷ್ಟ್ರೀಯ' ಪ್ರಶಸ್ತಿಗೆ ಅರ್ಹರಾದವರನ್ನು ಆಯ್ಕೆ ಮಾಡಲು ಆಯ್ಕೆ ಸಮಿತಿಯನ್ನು ರಚಿಸಲಾಗಿತ್ತು. ದಿನಾಂಕ:19.01.2006 ಮತ್ತು ದಿನಾಂಕ:01.02.2006ರಂದು ಸದರಿ ಆಯ್ಕೆ ಸಮಿತಿಯ ಸಭೆ ಸೇರಿ, ತಜ್ಞರ ಅಭಿಪ್ರಾಯಗಳನ್ನು ಪರಿಶೀಲಿಸಿ ಸುದೀರ್ಘ ಚರ್ಚೆಯ ನಂತರ **ಶ್ರೀ ದತ್ತಾತ್ರೇಯ ಸದಾಶಿವ ಗರೂಡ, ಬೆಂಗಳೂರು,** ಅವರನ್ನು ಆಯ್ಕೆ ಸಮಿತಿಯು ಒಮ್ಮತದಿಂದ 2005ನೇ ಸಾಲಿನ 'ಟಿ. ಚೌಡಯ್ಯ ರಾಷ್ಟ್ರೀಯ' ಪ್ರಶಸ್ತಿಗೆ ಆಯ್ಕೆ ಮಾಡಿದ್ದು, ಆಯ್ಕೆ ಸಮಿತಿಯ ಆಯ್ಕೆಯನ್ನು ಒಪ್ಪಿ ಈ ಸಂಬಂಧ ಸರ್ಕಾರಿ ಆದೇಶ ಹೊರಡಿಸುವಂತೆ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶಕರು ಕೋರಿದ್ದಾರೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 392 ಕಸಧ 2005, ಬೆಂಗಳೂರು, ದಿನಾಂಕ:4ನೇ ಏಪ್ರಿಲ್, 2006**

2005ನೇ ಸಾಲಿನ 'ಟಿ. ಚೌಡಯ್ಯ ರಾಷ್ಟ್ರೀಯ' ಪ್ರಶಸ್ತಿಗೆ **ಶ್ರೀ ದತ್ತಾತ್ರೇಯ ಸದಾಶಿವ ಗರೂಡ, ಬೆಂಗಳೂರು,** ಇವರನ್ನು ಸರ್ಕಾರವು ಆಯ್ಕೆ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಉಷಾ ಗಣೇಶ್**

ಪಿ.ಆರ್.583

ಸರ್ಕಾರದ ಪ್ರಧಾನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

**ವಿಷಯ:** ಕೊಡಗು ಜಿಲ್ಲೆ ಮಡಿಕೇರಿಯಲ್ಲಿ ಸ್ವಾತಂತ್ರ್ಯ ಹೋರಾಟಗಾರರಾದ ಹುತಾತ್ಮ ಗುಡ್ಡೇಮನೆ ಅಪ್ಪಯ್ಯಗೌಡ ಇವರ ಕಂಚಿನ ಪ್ರತಿಮೆ ನಿರ್ಮಾಣ-ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ:** (1) ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯರವರ ಪತ್ರ ಸಂಖ್ಯೆ: ಕಸನಿ/ ಸ್ಮಾರಕ/ 21/ 2004-05, ದಿನಾಂಕ:22.03.2006.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ, ದಿನಾಂಕ: 28.09.2005 ರಂದು ಮಡಿಕೇರಿ ಜಿಲ್ಲಾಧಿಕಾರಿಯವರ ಅಧ್ಯಕ್ಷತೆಯಲ್ಲಿ ನಡೆದ ಜಿಲ್ಲಾ ಸಮಿತಿ ಸಭೆಯಲ್ಲಿ ಸ್ವಾತಂತ್ರ್ಯ ಹೋರಾಟಗಾರರಾದ ದಿವಂಗತ ಗುಡ್ಡೇಮನೆ ಅಪ್ಪಯ್ಯಗೌಡ ಸ್ಮಾರಕ ಸಮಿತಿಯವರ ಕೋರಿಕೆಯ ಮೇರೆಗೆ ಮಡಿಕೇರಿಯ

ಸುದರ್ಶನ ವೃತ್ತದ ಎದುರಿನಲ್ಲಿರುವ ಉದ್ಯಾನವನಕ್ಕೆ ಸೇರಿದ ಜಾಗವನ್ನು ನಗರಸಭೆಯ ಅಧ್ಯಕ್ಷರು, ಉಪಾಧ್ಯಕ್ಷರು, ಮಡಿಕೇರಿ ವಿಧಾನಸಭಾ ಸದಸ್ಯರು, ನಗರಸಭೆ ಸದಸ್ಯರುಗಳು, ಗುಡ್ಡೆಮನೆ ಅಪ್ಪಯ್ಯಗೌಡ ಸ್ಮಾರಕ ಸಮಿತಿಯ ಪದಾಧಿಕಾರಿಗಳು ಹಾಗೂ ಲೋಕೋಪಯೋಗಿ ಇಲಾಖೆಯ ಸಹಾಯಕ ಕಾರ್ಯಪಾಲಕ ಅಭಿಯಂತರರು ಸ್ಥಳ ಪರಿಶೀಲಿಸಿದ ನಂತರ ಸರ್ಕಾರದ ಮಾರ್ಗಸೂಚಿಯಂತೆ ಅಪ್ಪಯ್ಯಗೌಡರವರ ಕಂಚಿನ ಪ್ರತಿಮೆ ನಿರ್ಮಾಣ ಯೋಜನೆಯನ್ನು ಅನುಷ್ಠಾನಗೊಳಿಸಲು ತೀರ್ಮಾನಿಸಿರುವ ಹಿನ್ನಲೆಯಲ್ಲಿ ಮಾರ್ಗಸೂಚಿಯಲ್ಲಿ ನಿಗದಿಪಡಿಸಿರುವಂತೆ ಪ್ರತಿಮೆ ನಿರ್ಮಾಣಕ್ಕೆ ಲೋಕೋಪಯೋಗಿ ಇಲಾಖೆಯು ತಯಾರಿಸಿರುವ ರೂ.8.00 ಲಕ್ಷಗಳ ಅಂದಾಜಿನ ಪೈಕಿ ರೂ.5.00 ಲಕ್ಷಗಳನ್ನು ಜಿಲ್ಲಾಧಿಕಾರಿಯವರಿಗೆ ಬಿಡುಗಡೆ ಮಾಡಬಹುದಾಗಿದೆ ಎಂದು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ನಿರ್ದೇಶನಾಲಯದ ನಿರ್ದೇಶಕರು, ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಪ್ರತಿಮೆಯು 4 ಮೀಟರ್ ಎತ್ತರವಾಗಿದ್ದು, ಕಂಚಿನ ಲೋಹದಿಂದ ತಯಾರಿಸಿರುವುದಾಗಿ ಅಂದಾಜು ಪಟ್ಟಿಯಲ್ಲಿ ತಿಳಿಸಲಾಗಿದೆ. ಪ್ರತಿಮೆ ನಿರ್ಮಾಣಕ್ಕೆ ಸಂಬಂಧಿಸಿದಂತೆ ನೀಲಿ ನಕಾಶೆ, ಅಂದಾಜು ಪಟ್ಟಿ ಇತ್ಯಾದಿಗಳನ್ನು ಲೋಕೋಪಯೋಗಿ ಇಲಾಖೆಯ ಮಡಿಕೇರಿ ವಿಭಾಗದ ಕಾರ್ಯಪಾಲಕ ಅಭಿಯಂತರರು ಒದಗಿಸಿರುತ್ತಾರೆ. ನಿರ್ದೇಶಕರವರ ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 9 ಸ್ಮಾಪ್ರನಿ 2006, ಬೆಂಗಳೂರು, ದಿನಾಂಕ:12ನೇ ಏಪ್ರಿಲ್, 2006**

ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ ಕೊಡಗು ಜಿಲ್ಲೆ, ಮಡಿಕೇರಿಯಲ್ಲಿ ಸ್ವಾತಂತ್ರ್ಯ ಹೋರಾಟಗಾರರಾದ ಹುತಾತ್ಮ ದಿವಂಗತ ಗುಡ್ಡೆಮನೆ ಅಪ್ಪಯ್ಯಗೌಡರವರ ಕಂಚಿನ ಪ್ರತಿಮೆಯನ್ನು ನಿರ್ಮಾಣ ಮಾಡಲು ರೂ.5.00 ಲಕ್ಷ ಅನುದಾನವನ್ನು ಮಡಿಕೇರಿ ಜಿಲ್ಲಾಧಿಕಾರಿಯವರಿಗೆ ಈ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

1. ಸರ್ಕಾರವು ಯಾವ ಉದ್ದೇಶಕ್ಕಾಗಿ ಹಣ ಮಂಜೂರು ಮಾಡಿದೆಯೋ ಅದೇ ಉದ್ದೇಶಕ್ಕೆ ಬಳಸುವುದು.
2. ಸರ್ಕಾರ ಮಂಜೂರು ಮಾಡಿದ ಹಣ ಸಮರ್ಪಕವಾಗಿ ಬಳಕೆಯಾದ ಬಗ್ಗೆ ಹಣ ಬಳಕೆ ಪ್ರಮಾಣ ಪತ್ರ ಹಾಗೂ ಮುಕ್ತಾಯ ದೃಢೀಕರಣ ಪತ್ರ ಸಲ್ಲಿಸುವುದು.
3. ಈ ಕಾಮಗಾರಿಯನ್ನು ಕೂಡಲೇ ಕೈಗೆತ್ತಿಕೊಂಡು ಆರು (6) ತಿಂಗಳೊಳಗಾಗಿ ಮುಕ್ತಾಯಗೊಳಿಸುವುದು.
4. ಪ್ರತಿಮೆ ನಿರ್ಮಾಣಕ್ಕೆ ಸಂಬಂಧಿಸಿದ ಕಾರ್ಯದ ಭೌತಿಕ ಆರ್ಥಿಕ ಪ್ರಗತಿಯನ್ನು ಸಂಬಂಧಪಟ್ಟ ಜಿಲ್ಲೆಯ ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯರವರು ಸ್ಥಳ ಪರಿವೀಕ್ಷಣೆ ಮಾಡಿ ಮಾಸಿಕ ಆರ್ಥಿಕ ಮತ್ತು ಭೌತಿಕ ಪ್ರಗತಿಯನ್ನು ಜಿಲ್ಲಾಧಿಕಾರಿಯವರಿಗೆ ಕಳುಹಿಸುವುದು. ನಂತರ ಜಿಲ್ಲಾಧಿಕಾರಿಯವರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು ಇವರಿಗೆ ತಮ್ಮ ಷರಾಗಳೊಂದಿಗೆ ಕಳುಹಿಸುವುದು.
5. ಪ್ರತಿಮೆ ನಿರ್ಮಾಣಕ್ಕೆ ಸಂಬಂಧಿಸಿದಂತೆ ನಿರ್ಮಾಣ ಮುಕ್ತಾಯಗೊಂಡ ನಂತರ ಮುಕ್ತಾಯ ದೃಢೀಕರಣ, ಆರ್ಥಿಕ ದೃಢೀಕರಣ ಪ್ರಮಾಣ ಪತ್ರಗಳನ್ನು ಸಂಬಂಧಪಟ್ಟ ಜಿಲ್ಲಾಧಿಕಾರಿಯವರು, ಸಂಬಂಧಪಟ್ಟ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯಕ್ಕೆ ಕಳುಹಿಸಿಕೊಡುವುದು.

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ 4202-04-800-1-02-139 (ಯೋಜನೇತರ) ಅಡಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.07.1996ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರದತ್ತವಾಗಿರುವ ಅಧಿಕಾರ ಪ್ರತ್ಯಾಯೋಜನೆಯಡಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸಾಂಬಶಿವಂ**

ಪಿ.ಆರ್.584

ಪೀಠಾಧಿಕಾರಿ,

ಕನ್ನಡ ಮತ್ತು ಸಂಸ್ಕೃತಿ ಇಲಾಖೆ (ಆಡಳಿತ ಕನ್ನಡ).

**ವಿಷಯ:** 'ಸುವರ್ಣ ಕರ್ನಾಟಕ' ಉತ್ಸವದ ಆಚರಣೆ ಅಂಗವಾಗಿ ವಿಶ್ವಕನ್ನಡ ಸಮ್ಮೇಳನ- ನಡೆಸುವ ಕುರಿತು.

**ಓದಲಾಗಿದೆ:** (1) ಸರ್ಕಾರದ ಆದೇಶ ಸಂಖ್ಯೆ: ಸಂಕಇ 27 ಕರಅ 05 (1) ದಿನಾಂಕ:26.09.2005.

(2) ದಿನಾಂಕ: 05.12.2005 ಹಾಗೂ 07.02.2006ರಂದು ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ನಡೆದ ಹಿರಿಯ ಸಾಹಿತಿಗಳ ಕಲಾವಿದರ ಹಾಗೂ ಗಣ್ಯವ್ಯಕ್ತಿಗಳ ಸಭೆ.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ ಕರ್ನಾಟಕವು ಏಕೀಕರಣಗೊಂಡು 01.11.2006ಕ್ಕೆ 50 ವರ್ಷಗಳು ತುಂಬುತ್ತಿರುವ ಸಂದರ್ಭದಲ್ಲಿ 'ಸುವರ್ಣ ಕರ್ನಾಟಕ ಜಯಂತಿಯ' ಆಚರಣೆ ಅಂಗವಾಗಿ 'ವಿಶ್ವಕನ್ನಡ ಸಮ್ಮೇಳನವನ್ನು' 2006ರ ನವೆಂಬರ್ ಮಾಹೆಯಲ್ಲಿ 3 ದಿನಗಳ ಅವಧಿಯಲ್ಲಿ ಬೆಂಗಳೂರಿನಲ್ಲಿ ನಡೆಸಲು ನಿರ್ಧರಿಸಿ ಆದೇಶ ಹೊರಡಿಸಲಾಗಿದೆ.

ಮೇಲೆ ಓದಲಾದ (2)ರ ಪ್ರಸ್ತಾಪಿತ ಸಭೆಗಳಲ್ಲಿ ಹಿರಿಯ ಸಾಹಿತಿಗಳು, ಕಲಾವಿದರು, ಗಣ್ಯರು ಹಾಗೂ ಬುದ್ಧಿಜೀವಿಗಳೊಂದಿಗೆ ನಡೆಸಿದ ಸಭೆಯಲ್ಲಿ ವಿಶ್ವಕನ್ನಡ ಸಮ್ಮೇಳನವನ್ನು ಬೆಂಗಳೂರಿನಲ್ಲಿ ನಡೆಸುವ ಬದಲಾಗಿ ರಾಜ್ಯದ ಪ್ರಮುಖ ಸ್ಥಳಗಳಾದ ಹುಬ್ಬಳ್ಳಿ, ಧಾರವಾಡ, ಬೆಳಗಾವಿ, ದಾವಣಗೆರೆ, ಮಂಗಳೂರು ಹಾಗೂ ಶಿವಮೊಗ್ಗ ಈ ಸ್ಥಳಗಳ ಪೈಕಿ ಯಾವುದಾದರೂ ಒಂದು ಸ್ಥಳದಲ್ಲಿ ನಡೆಸಲು ಸಲಹೆ ಹಾಗೂ ಅಭಿಪ್ರಾಯಗಳು ವ್ಯಕ್ತವಾಗಿರುತ್ತವೆ. ಈ ಹಿನ್ನೆಲೆಯಲ್ಲಿ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದೆ ಅಂತೆಯೇ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 41 ಕರಅ 2006, ಬೆಂಗಳೂರು, ದಿನಾಂಕ:18ನೇ ಏಪ್ರಿಲ್, 2006**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ 'ಸುವರ್ಣ ಕರ್ನಾಟಕ ಜಯಂತಿ' ಆಚರಣೆ ಅಂಗವಾಗಿ 'ವಿಶ್ವಕನ್ನಡ ಸಮ್ಮೇಳನವನ್ನು' ಬೆಳಗಾವಿ ನಲ್ಲಿ ನಡೆಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಉಷಾ ಗಣೇಶ್**

ಪಿ.ಆರ್.585

ಸರ್ಕಾರದ ಪ್ರಧಾನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಸದಲಗಾ ಉಪ ನೋಂದಣಿ ಕಛೇರಿಯಲ್ಲಿ ರೂ.10,40,000/-ಗಳಲ್ಲಿ ಕಟ್ಟಲು ಆಡಳಿತಾತ್ಮಕ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:** (1) ಬೆಳಗಾವಿ ಜಿಲ್ಲಾ ನೋಂದಣಾಧಿಕಾರಿಗಳ ಪತ್ರ ಸಂಖ್ಯೆ: ಕಟ್ಟಡ: 01:05-06, ದಿನಾಂಕ: 27.06.2005.

(2) ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ: ಬಿಎಲ್‌ಡಿ/ 6/ 01-02, ದಿನಾಂಕ:23.07.2005.

(3) ಸರ್ಕಾರಿ ಆದೇಶ ಸಂಖ್ಯೆ: ಕಂಇ 543 ಮುನೋಮು 2005, ದಿನಾಂಕ: 07.11.2005.

(4) ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ: ಬಿಎಲ್‌ಡಿ/ 7/ 01-02, ದಿನಾಂಕ:28.02.2006.

(5) ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ವಿಭಾಗದ ಲೋಕೋಪಯೋಗಿ ಇಲಾಖೆಯ ಕಾರ್ಯಪಾಲ ಅಭಿಯಂತರರು ಇವರ ಪತ್ರ ಸಂಖ್ಯೆ: ಲೋ.ಇ./ ಲೆಶಾ/ ಎಬಿ-1/ ಅನುದಾನ/ 2005-06, ದಿನಾಂಕ:01.03.2006.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಬೆಳಗಾವಿ ಜಿಲ್ಲಾ ನೋಂದಣಾಧಿಕಾರಿಗಳ ಪತ್ರ ದಿನಾಂಕ:27.06.2005 ರ ಪತ್ರದಲ್ಲಿ ಸದಲಗಾ ಉಪ ನೋಂದಣಿ ಕಛೇರಿಯ ಕಟ್ಟಡ ಬಾಡಿಗೆ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಸದರಿ ಕಟ್ಟಡವು ಬಹಳ ಚಿಕ್ಕದಿದ್ದು, ನೋಂದಣಿಗಾಗಿ ಬರುವ ಸಾರ್ವಜನಿಕ ಹಿತದೃಷ್ಟಿಯಿಂದ ಹಾಗೂ ಆಡಳಿತಾತ್ಮಕ ಹಿತದೃಷ್ಟಿಯಿಂದ ಸದರಿ ಉಪ ನೋಂದಣಿ ಕಛೇರಿಗೆ ಶಾಶ್ವತವಾದ ಕಟ್ಟಡದ ಅವಶ್ಯಕತೆಯಿದೆ ಎಂದು ತಿಳಿಸಲಾಗಿದೆ. ಲೋಕೋಪಯೋಗಿ ಇಲಾಖೆಯವರು ಸದರಿ ಕಟ್ಟಡಕ್ಕೆ ಅಂದಾಜು ರೂ.10,40,000/-ಗಳು ವೆಚ್ಚವಾಗುತ್ತದೆಂದು ತಿಳಿಸಿರುತ್ತಾರೆ.

2) ಮೇಲೆ (2)ರಲ್ಲಿ ಓದಲಾದ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ದಿನಾಂಕ: 23.07.2005ರ ಪತ್ರದಲ್ಲಿ 2005-06ನೇ ಸಾಲಿನ ಆಯವ್ಯಯದಲ್ಲಿ ಇಲಾಖೆಯ ಕಟ್ಟಡಗಳಿಗಾಗಿ 2.00 ಕೋಟಿ ರೂಪಾಯಿಗಳು ಮೀಸಲಿಟ್ಟಿದ್ದು, ಅದರಲ್ಲಿ ಸದಲಗಾ ಉಪ ನೋಂದಣಿ ಕಛೇರಿ ಕಟ್ಟಡದ ನಿರ್ಮಾಣಕ್ಕಾಗಿ ತಗಲುವ ವೆಚ್ಚ ರೂ.10,40,000/-ಗಳ ಪ್ರಸ್ತಾವನೆಯನ್ನು ಬೆಳಗಾವಿ ಜಿಲ್ಲಾ ನೋಂದಣಾಧಿಕಾರಿಗಳವರು ಸಲ್ಲಿಸಿದ್ದು, ಇದಕ್ಕೆ ಆಡಳಿತಾತ್ಮಕ ಮಂಜೂರಾತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

3) ಮೇಲೆ (3)ರಲ್ಲಿ ಓದಲಾದ ದಿನಾಂಕ: 07.11.2005 ರ ಸರ್ಕಾರಿ ಆದೇಶದಲ್ಲಿ ಬೆಳಗಾವಿ ಜಿಲ್ಲೆಯ ಸದಲಗಾ ಉಪ ನೋಂದಣಿ ಕಛೇರಿಯ ಕಟ್ಟಡಗಳಿಗಾಗಿ ಲೆಕ್ಕ ಶೀರ್ಷಿಕೆ 4059 ಅಡಿಯಲ್ಲಿ ಎರಡು ಕೋಟಿ ರೂಪಾಯಿಗಳನ್ನು ಮೀಸಲಿರಿಸಿರುವ ಹಣದಲ್ಲಿ ರೂ.10,40,000/- ಗಳಿಗೆ ಆಡಳಿತಾತ್ಮಕ ಮಂಜೂರಾತಿ ನೀಡಲಾಗಿದೆ.

4) ಮೇಲೆ (4)ರಲ್ಲಿ ಓದಲಾದ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ದಿನಾಂಕ: 23.07.2005ರ ಪತ್ರದಲ್ಲಿ ಆಡಳಿತಾತ್ಮಕ ಮಂಜೂರಾತಿ ನೀಡಿದ ಈ ಹಣವನ್ನು ಬಿಡುಗಡೆ ಮಾಡುವಂತೆಯೂ ಮತ್ತು ಸದರಿ ಆದೇಶದ ವಿವರಗಳನ್ನು ಎನ್.ಎಂ.ಸಿ.ಯಲ್ಲಿ ಲೋಡ್ ಮಾಡಲು ವಿನಂತಿಸಿಕೊಂಡಿರುತ್ತಾರೆ.

5) ಮೇಲೆ (5)ರಲ್ಲಿ ಓದಲಾದ ಪತ್ರ ದಿನಾಂಕ: 01.03.2006ರಲ್ಲಿ ಚಿಕ್ಕೋಡಿ ವಿಭಾಗದ ಕಾರ್ಯಪಾಲ ಅಭಿಯಂತರರು ಈಗಾಗಲೇ ಟೆಂಡರ್ ಮೂಲಕ ಕಟ್ಟಡದ ಕೆಲಸವನ್ನು ಕಾಂಟ್ರಾಕ್ಟುದಾರರಿಗೆ ಕೊಡಲಾಗಿದ್ದು, ಕೆಲಸ ಪ್ರಾರಂಭಿಸಲಾಗಿದೆ ಎಂದು ವರದಿ ಮಾಡಿರುತ್ತಾರೆ. ಅದರಂತೆ ಈ ಹಣವನ್ನು ಡಿ.ಡಿ. ಮೂಲಕ ತಮ್ಮ ಹೆಸರಿಗೆ ನೀಡಲು ವಿನಂತಿಸಿರುತ್ತಾರೆ. ಹೀಗೆ ಪಡೆದ ಹಣವನ್ನು ಲೆಕ್ಕ ಶೀರ್ಷಿಕೆ 8782-00-102-1-00-pw-Remittance ಗೆ ಜಮಾ ಮಾಡಿ ಲೆಕ್ಕ ಶೀರ್ಷಿಕೆ 8443 ಠೇವಣಿ ವಂತಿಕೆಯ ಅಡಿ ಭರವಸೆ ಪತ್ರ ಪಡೆದು ಈ ಹಣವನ್ನು ವಿನಿಯೋಗಿಸಲಾಗುವುದು ಎಂದು ತಿಳಿಸಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

### ಸರ್ಕಾರಿ ಆದೇಶ ಸಂಖ್ಯೆ: ಕಂಇ 88 ಮುನೋಮು 2006, ಬೆಂಗಳೂರು, ದಿನಾಂಕ:29ನೇ ಮಾರ್ಚ್, 2006

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೆಳಗಾವಿ ಜಿಲ್ಲೆಯ ಸದಲಗಾ ಉಪ ನೋಂದಣಿ ಕಛೇರಿಯ ಕಟ್ಟಡ ನಿರ್ಮಾಣಕ್ಕಾಗಿ ಲೆಕ್ಕ ಶೀರ್ಷಿಕೆ 4059-80-051-0-30-386 ಅಡಿಯಲ್ಲಿ ಎರಡು ಕೋಟಿ ರೂಪಾಯಿಗಳನ್ನು ಒದಗಿಸಲಾಗಿದ್ದು, ಈ ಹಣದಲ್ಲಿ ಈ ಕಛೇರಿಯ ಕಟ್ಟಡ ನಿರ್ಮಾಣಕ್ಕಾಗಿ ರೂ.10,40,000/- (ರೂ. ಹತ್ತು ಲಕ್ಷ ನಲವತ್ತು ಸಾವಿರ) ಗಳಿಗೆ ಆಡಳಿತಾತ್ಮಕ ಮಂಜೂರಾತಿ ನೀಡಿ ಹಣ ಬಿಡುಗಡೆ ಮಾಡಲು ಈ ಮೂಲಕ ಆದೇಶಿಸಿದೆ.

ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರು ಈ ಹಣವನ್ನು ಸಾದಿಲ್‌ವಾರು ಬಿಲ್ಲುಗಳ ಮೂಲಕ ರಾಜ್ಯ ಹುಜೂರ್ ಖಜಾನೆಯಲ್ಲಿ ಪಡೆದು ಲೋಕೋಪಯೋಗಿ ಇಲಾಖೆಯ ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ವಿಭಾಗದ ಕಾರ್ಯಪಾಲ ಅಭಿಯಂತರರಿಗೆ ಪಾವತಿಸಲು ಆದೇಶಿಸಿದೆ. ಹೀಗೆ ಪಡೆದ ಹಣವನ್ನು ಕಾರ್ಯಪಾಲ ಅಭಿಯಂತರರು ಲೆಕ್ಕ ಶೀರ್ಷಿಕೆ 8782-00-102-1-00-PW-Remittance ಗೆ ಜಮಾ ಮಾಡಿ ಲೆಕ್ಕ ಶೀರ್ಷಿಕೆ 8443 ಠೇವಣಿ ವಂತಿಕೆಯ ಅಡಿ ಹಣವನ್ನು ಭರವಸೆ ಪತ್ರ ಪಡೆದು ವಿನಿಯೋಗಿಸುವಂತೆ ನಿರ್ದೇಶನ ನೀಡಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.07.1996 ರನ್ವಯ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರಮೇಶ್ ಕೆ. ಜಾಗೀರ್‌ದಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

ಪಿ.ಆರ್.586

**ವಿಷಯ:** ಶ್ರೀ ಎನ್.ಟಿ. ಮಾದರ್, ಕಾರ್ಯನಿರ್ವಾಹಕ ಅಧಿಕಾರಿ, ಶ್ರೀ ಸುಬ್ರಹ್ಮಣ್ಯಸ್ವಾಮಿ ದೇವಸ್ಥಾನ, ಘಾಟಿ, ದೊಡ್ಡಬಳ್ಳಾಪುರ ತಾಲ್ಲೂಕು ಇವರ ಮೇಲಿನ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ಹೂಡುವುದನ್ನು ಬಾಕಿ ಇರಿಸಿ, ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ:** ಧಾರ್ಮಿಕ ದತ್ತಿ ಆಯುಕ್ತರು, ಬೆಂಗಳೂರು ಇವರ ಪತ್ರ ಸಂಖ್ಯೆ: ಎಡಿಎಂ/1/ ಸಿಆರ್/ 1002/ 2005-06, ದಿನಾಂಕ:04.03.2006.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ದೊಡ್ಡಬಳ್ಳಾಪುರ ತಾಲ್ಲೂಕು, ಘಾಟಿ ಶ್ರೀ ಸುಬ್ರಹ್ಮಣ್ಯ ಸ್ವಾಮಿ ದೇವಾಲಯವು ಕಾಯಿದೆಯಡಿ ಪ್ರವರ್ಗ 'ಎ' ಅಧಿಸೂಚಿತ ಸಂಸ್ಥೆಯಾಗಿದೆ. ಸದರಿ ದೇವಾಲಯದ ವಾಹನ ಚಾಲಕರಾದ ಶ್ರೀ ವೆಂಕಟೇಶ್ ಇವರ ಮನೆಯಿಂದ ದಿನಾಂಕ: 28.02.2006ರಂದು 4-5 ಮೂಟೆ ಹಣ ಹಾಗೂ ಹರಕೆ ಸಾಮಾನುಗಳನ್ನು ಪೊಲೀಸರು ವಶಪಡಿಸಿಕೊಂಡು ಶ್ರೀ ವೆಂಕಟೇಶ್, ವಾಹನ ಚಾಲಕರನ್ನು ಬಂಧಿಸಿರುವುದಾಗಿ ಶ್ರೀ ಎಂ.ಜಿ. ಜಗನ್ನಾಥ್, ಮಾಜಿ ಗ್ರಾಮ ಪಂಚಾಯಿತಿ ಸದಸ್ಯರು, ಮೇಲಿನ ಜೂಗಾನಹಳ್ಳಿ ಎಂಬುವರಿಂದ ದಿನಾಂಕ: 01.03.2006ರಂದು ದೂರು ಅರ್ಜಿ ಬಂದ ಹಿನ್ನಲೆಯಲ್ಲಿ ಕಾರ್ಯನಿರ್ವಾಹಕ ಅಧಿಕಾರಿಗಳಿಂದ ಈ ಬಗ್ಗೆ ವರದಿ ಕೇಳಲಾಯಿತು ಎಂದು ಅದರಂತೆ ಕಾರ್ಯನಿರ್ವಾಹಕ ಅಧಿಕಾರಿಗಳು ಸಲ್ಲಿಸಿದ ದಿನಾಂಕ: 01.03.2006ರ ವರದಿಯಲ್ಲಿ ದೊಡ್ಡಬಳ್ಳಾಪುರ ತಾಲ್ಲೂಕು, ಘಾಟಿ ರಸ್ತೆಯಲ್ಲಿರುವ ಕೆಲವು ಅಂಗಡಿಗಳ ಬಳಿ ಸಂಶಯಾಸ್ಪದವಾಗಿ ಚಿಲ್ಲರೆ ಹಣದೊಂದಿಗೆ ಅಡ್ಡಾಡುತ್ತಿದ್ದ ವ್ಯಕ್ತಿಯನ್ನು ಬಂಧಿಸಿ ವಿಚಾರಣೆ ಮಾಡಲಾಗಿ ದೇವಾಲಯದ ಚಾಲಕನಾದ ಶ್ರೀ ವೆಂಕಟೇಶ್ ಎಂದು ತಿಳಿದುಬಂದಿದೆ ಎಂದು ಪೊಲೀಸರು ಸದರಿ ಆರೋಪಿತನ ವಿರುದ್ಧ 40/2006 ರಲ್ಲಿ ಕೇಸನ್ನು ದಾಖಲಿಸಿಕೊಂಡು ಐಪಿಸಿ ಸೆಕ್ಷನ್ 102 ರಂತೆ ನ್ಯಾಯಾಲಯಕ್ಕೆ ಪ್ರಥಮ ವರದಿ ಸಲ್ಲಿಸಿ ವಿಚಾರಣೆಗೆ ಒಳಪಡಿಸಿದ್ದಾರೆಂದು ವರದಿ ಸಲ್ಲಿಸಿರುತ್ತಾರೆಂದು ಮೇಲೆ ಓದಲಾದ ದಿನಾಂಕ: 04.03.2006ರ ಪತ್ರದಲ್ಲಿ ಧಾರ್ಮಿಕ ದತ್ತಿ ಇಲಾಖೆಯ ಆಯುಕ್ತರು ವರದಿ ಸಲ್ಲಿಸಿರುತ್ತಾರೆ.

ಮುಂದುವರೆದು, ಈ ದೇವಾಲಯಕ್ಕೆ ಬೆಂಗಳೂರು ಗ್ರಾಮಾಂತರ ಜಿಲ್ಲೆ ಜಿಲ್ಲಾಧಿಕಾರಿಗಳು ಆಡಳಿತಾಧಿಕಾರಿಗಳಾಗಿದ್ದು ಸದರಿ ವಿಚಾರದಲ್ಲಿ ಖುದ್ದು ಸ್ಥಳ ತನಿಖೆ ನಡೆಸಲು ಅಥವಾ ಕಂದಾಯ ಇಲಾಖೆಯ ಕನಿಷ್ಠ ಸಮೂಹ 'ಎ' ದರ್ಜೆಯ ಅಧಿಕಾರಿಯಿಂದ ತನಿಖೆ ನಡೆಸಿ ವರದಿ ಸಲ್ಲಿಸಲು ಅದೇ ದಿನ ಅಂದರೆ ದಿನಾಂಕ: 01.03.2006ರಂದು ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಇವರನ್ನು ಧಾರ್ಮಿಕ ದತ್ತಿ ಇಲಾಖೆಯ ಆಯುಕ್ತರು ಕೋರಿದ್ದರ ಮೇರೆಗೆ ಜಿಲ್ಲಾಧಿಕಾರಿಗಳು ಪ್ರಕರಣದ ಬಗ್ಗೆ ಉಪವಿಭಾಗಾಧಿಕಾರಿಗಳಿಂದ ತನಿಖೆ ನಡೆಸಿ ತನಿಖಾ ವರದಿಯೊಂದಿಗೆ ವರದಿ ಸಲ್ಲಿಸಿರುತ್ತಾರೆಂದು, ಅದರ ಹಿನ್ನೆಲೆಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳು ತಮ್ಮ ವರದಿಯಲ್ಲಿ ಆಪಾದಿತ ನೌಕರ ಶ್ರೀ ವೆಂಕಟೇಶ್, ವಾಹನ ಚಾಲಕರು, ಇವರ ಬಳಿ ಇದ್ದಿತು ಎನ್ನಲಾದ ಹಣವು ಹುಂಡಿ ತೆರೆದು ಎಣಿಕೆ ಮಾಡುವಾಗ ಕಳ್ಳತನದಿಂದ ಕಣ್ ತಪ್ಪಿಸಿ ಸಂಗ್ರಹಿಸಿದ ಹಣವಾಗಿರುವುದಿಲ್ಲ, ಬದಲಿಗೆ ವ್ಯವಸ್ಥಿತವಾಗಿ, ರಾತ್ರಿ ವೇಳೆ ಹುಂಡಿಗಳನ್ನು ಬೀಗದ ಕೈ ಉಪಯೋಗಿಸಿ ಸಂಗ್ರಹಿಸಿದ ಹಣವಾಗಿರುತ್ತದೆ ಎಂದು ಹಾಗೂ ಈ ಕಾರ್ಯಕ್ಕೆ ಕಾರ್ಯನಿರ್ವಾಹಕ ಅಧಿಕಾರಿಗಳು ಶಾಮೀಲಾಗಿರುವ ಸಾಧ್ಯತೆ ಇದೆ ಎಂದು ಉಪವಿಭಾಗಾಧಿಕಾರಿಗಳು ತಮ್ಮ ವರದಿಯಲ್ಲಿ ವ್ಯಕ್ತಪಡಿಸಿದ್ದಾರೆಂದು ವರದಿ ಮಾಡಿದ್ದರ ಮೇರೆಗೆ ಈ ದುಷ್ಕೃತ್ಯದ ವಿರುದ್ಧ ಸೂಕ್ತ ಕ್ರಮ ಜರುಗಿಸುವಲ್ಲಿ ಹಾಗೂ ಕಾಲ ಕಾಲಕ್ಕೆ ಸೂಕ್ತ ಮೇಲ್ವಿಚಾರಣೆ ನಡೆಸುವಲ್ಲಿ ಕಾರ್ಯನಿರ್ವಾಹಕ ಅಧಿಕಾರಿಗಳು ವಿಫಲರಾಗಿ ಕರ್ತವ್ಯ ಲೋಪ ಎಸಗಿ ದೇವಾಲಯದ ಪಾವಿತ್ರ್ಯತೆಗೆ ಹಾಗೂ ಘನತೆಗೆ ಧಕ್ಕೆ ಉಂಟಾಗಲು ಕಾರಣರಾಗಿರುತ್ತಾರೆಂದು ವರದಿ ಮಾಡಿರುತ್ತಾರೆ. ಅಲ್ಲದೇ, ಹುಂಡಿಯ ಬೀಗದ ಕೈ ಕಾರ್ಯನಿರ್ವಾಹಕ ಅಧಿಕಾರಿಯವರ ವಶದಲ್ಲೇ ಇರುವುದರಿಂದ ಈ ದುಷ್ಕೃತ್ಯಕ್ಕೆ ಅವರನ್ನೇ ನೇರ ಹೊಣೆಗಾರರನ್ನಾಗಿ ಮಾಡಬೇಕಾಗಿರುತ್ತದೆಂದು ಈ ಎಲ್ಲಾ ಕಾರಣಗಳಿಂದ ದೇವಸ್ಥಾನದ ಕಾರ್ಯನಿರ್ವಾಹಕ ಅಧಿಕಾರಿಗಳನ್ನು ತತ್‌ಕ್ಷಣದಿಂದ ಜಾರಿಗೆ ಬರುವಂತೆ ಇಲಾಖಾ ವಿಚಾರಣೆ ಬಾಕಿ ಇರಿಸಿ ಅಮಾನತ್ತುಗೊಳಿಸಲು ಜಿಲ್ಲಾಧಿಕಾರಿಗಳು ಶಿಫಾರಸ್ಸು ಮಾಡಿರುತ್ತಾರೆಂದು ಹಾಗೂ ಆರೋಪಿ ನೌಕರನಾದ ಶ್ರೀ ವೆಂಕಟೇಶ್, ವಾಹನ ಚಾಲಕರು ಇವರ ಜೊತೆಗೆ ಈ ದೇವಾಲಯದ ರಾತ್ರಿ ಕಾವಲುಗಾರರಾದ ಶ್ರೀ ಚಿಕ್ಕ ಬೊಮ್ಮಯ್ಯ ಹಾಗೂ ಶ್ರೀ ಕೊಂಡಪ್ಪ ಮತ್ತು ಹಗಲು ಕಾವಲುಗಾರರಾದ ಶ್ರೀ ಗಂಗಪ್ಪ ಇವರುಗಳನ್ನು ಇಲಾಖಾ ವಿಚಾರಣೆ ಬಾಕಿ ಇರಿಸಿ ದಿನಾಂಕ: 04.03.2006ರಂದು ಸೇವೆಯಿಂದ ಅಮಾನತ್ತುಗೊಳಿಸಲಾಗಿದೆ ಎಂದೂ ಸಹ ಧಾರ್ಮಿಕ ದತ್ತಿ ಇಲಾಖೆಯ ಆಯುಕ್ತರು ವರದಿ ಮಾಡಿರುತ್ತಾರೆ.

ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳ ವರದಿಯ ಹಿನ್ನಲೆಯಲ್ಲಿ ಶ್ರೀ ಎನ್.ಟಿ. ಮಾದರ್ (ಸಮೂಹ 'ಎ' ಅಧಿಕಾರಿಗಳು), ಕಾರ್ಯನಿರ್ವಾಹಕ ಅಧಿಕಾರಿಗಳು, ಘಾಟಿ ಶ್ರೀ ಸುಬ್ರಹ್ಮಣ್ಯ ಸ್ವಾಮಿ ದೇವಸ್ಥಾನ, ದೊಡ್ಡಬಳ್ಳಾಪುರ ತಾಲ್ಲೂಕು ಇವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವುದನ್ನು ಬಾಕಿ ಇರಿಸಿ, ಸೇವೆಯಿಂದ ಅಮಾನತ್ತುಗೊಳಿಸುವಂತೆ ಧಾರ್ಮಿಕ ದತ್ತಿ ಇಲಾಖೆಯ ಆಯುಕ್ತರು ಸಹ ಶಿಫಾರಸ್ಸು ಮಾಡಿ ಸರ್ಕಾರವನ್ನು ಕೋರಿರುತ್ತಾರೆ. ಈ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 31 ಮುಸೇವಿ 2006, ಬೆಂಗಳೂರು, ದಿನಾಂಕ: 4ನೇ ಏಪ್ರಿಲ್, 2006**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ ಶ್ರೀ ಎನ್.ಟಿ. ಮಾದರ್ (ಸಮೂಹ 'ಎ' ಅಧಿಕಾರಿಗಳು), ಕಾರ್ಯನಿರ್ವಾಹಕ ಅಧಿಕಾರಿಗಳು, ಘಾಟಿ ಶ್ರೀ ಸುಬ್ರಹ್ಮಣ್ಯ ಸ್ವಾಮಿ ದೇವಸ್ಥಾನ, ದೊಡ್ಡಬಳ್ಳಾಪುರ ತಾಲ್ಲೂಕು ಇವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವುದನ್ನು ಬಾಕಿ ಇರಿಸಿ, ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 10(1)(ಡಿ) ರನ್ವಯ ಸೇವೆಯಿಂದ ಅಮಾನತ್ತುಗೊಳಿಸಲಾಗಿದೆ.

ಸದರಿ ಅಧಿಕಾರಿಯು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98ರನ್ವಯ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ ಹಾಗೂ ಸಕ್ಷಮ ಪ್ರಾಧಿಕಾರಿಯವರ ಅನುಮತಿ ಇಲ್ಲದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಎನ್. ಪ್ರಸಾದ್**

ಪಿ.ಆರ್.587

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಮುಜರಾಯಿ)

